# Our Thanks To.......

Z.P. Tumkur
Mysore Minirals Ltd. Tumkur.
TUDA Tumkur
RTO Tumkur
Excise Dept. Tumkur
Hemavathy Canal Project
DDPI Tumkur
APMC Tumkur
CMC
Asst Commissioner
Dept Food & Civil Supply
KSCC
DIC, Tumkur.
Tumkur Medical Stores Association
Karnataka Forest Department
Police Department Tumkur
Hotel & Restaurants Association
Pawn Brokers Association
Sarvodaya Education Society
Daffodils Edncdian Society, Tiptur.
Mysore Cements
Mysore Brevaries Bangalore
District Health Department
Canara Bank
Balaji Travells
SRS Travells
Vidyaniketan School
Chetana School
Bishop Sarjant English School
Tukali Televisions

Gajanana Constructions Company

Mytri Association

Vyshy Mahila Association

Centura Watch Case (P) Ltd.

Contractors Credit Co-op Society

TGMC Bank Ltd

Sridevi Nursing Home

Tumkur District Medical Association

V.S. Jewellers

Kishore Jewellers

Mahaveer Distributors

National .... Group

N.T.C

Dr. T.B. Basavarajendra

N.J. Hiriyannaiah

R.M.B. Aradhya

Dr. Doreswamy Madras

M.N. Murthy

B.S. Manjunath

Prasanna Kumar B.N

Mr.. Ashraf Hussain

Prof. M. Prasanna Kumar

M.K. Srinivasulu

D.M. Sreedhar

M.V. Ramachandra



**ಸ್ಕೌಟಿಂಗ್ 1907 ರಿಂದ 1997**

## ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಮತ್ತು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ತುಮಕೂರು.

**23 ನೆಯ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್, ಜಾಂಬೋರೇಟ್**

1997 ರ ಜನವರಿ 4 ರಿಂದ 10

# ಆಹ್ವಾನ ಪತ್ರಿಕೆ

*ಸ್ಥಳ: ಮಹಾತ್ಮ ಗಾಂಧಿ ಕ್ರೀಡಾಂಗಣ, ತುಮಕೂರು.*

**ತಮಗೆ ಆದರದ ಸ್ವಾಗತ**

ಐ.ಎಂ. ವಿಠ್ಠಲಮೂರ್ತಿ, ಐ.ಎ.ಎಸ್.
*ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು*
*ಸಂಘಟನಾ ಸಮಿತಿ, ತುಮಕೂರು.*

ಕೊಂಡಜ್ಜಿ ಬಿ. ಷಣ್ಮುಖಪ್ಪ,
*ರಾಜ್ಯ ಮುಖ್ಯ ಆಯುಕ್ತರು*
*ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ*

ಹಾಗೂ ಸದಸ್ಯರು, ಜಾಂಬೋರೇಟ್ ಸಂಘಟನಾ ಸಮಿತಿ

**ಪರಿಸರ ರಕ್ಷಿಸಿ.... ಪರಿಸರ ನಮ್ಮನ್ನು ರಕ್ಷಿಸುತ್ತದೆ**

---

ದಿನಾಂಕ 4-1 -97 ಶನಿವಾರ | **ಸ್ಥಳೀಯ ಪ್ರತಿಭಾ ಪ್ರದರ್ಶನ** | ಸಂಜೆ 6 ಗಂಟೆಗೆ

ಸ್ಥಳ : ಮಹಾತ್ಮ ಗಾಂಧಿ ಕ್ರೀಡಾಂಗಣ, ತುಮಕೂರು

*ಅಧ್ಯಕ್ಷರು :*

ಶ್ರೀ ವಿ.ಪಿ. ದೀನದಯಾಳು ನಾಯ್ಡು,

*ಮಾಜಿ ರಾಷ್ಟ್ರೀಯ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್*

*ಮುಖ್ಯ ಅತಿಥಿಗಳು :*

*ಶ್ರೀ ಟಿ.ಹೆಚ್. ಜಯರಾಂ, ಅಧ್ಯಕ್ಷರು, ನಗರಸಭೆ, ತುಮಕೂರು*

*ಡಾ. ಜಿ. ಶಿವಪ್ರಸಾದ್, ಕಾರ್ಯದರ್ಶಿಗಳು, ಶ್ರೀ ಸಿದ್ಧಾರ್ಥ ವಿದ್ಯಾಸಂಸ್ಥೆ, ತುಮಕೂರು.*

*ಶ್ರೀಮತಿ ಲೀಲಾ ಅಂಜನಪ್ಪ, ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ*

## ಉದ್ಘಾಟನಾ ಸಮಾರಂಭ

ಭಾನುವಾರ 05-01-1997 ಬೆಳಗ್ಗೆ 10.00

**ಪರಮಪೂಜ್ಯ ಡಾ ಶ್ರೀ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು**

*ಶ್ರೀ ಸಿದ್ಧಗಂಗಾ ಮಠ, ಇವರ ಸನ್ನಿಧಿಯಲ್ಲಿ*

**ಉದ್ಘಾಟನೆ : ಶ್ರೀ ಜೆ.ಎಚ್. ಪಟೇಲ್,**

*ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ*

**ಮುಖ್ಯ ಅತಿಥಿಗಳು**

**ಶ್ರೀ ಎಂ.ಪಿ. ಪ್ರಕಾಶ್,**

*ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವರು, ಕರ್ನಾಟಕ ಸರ್ಕಾರ.*

**ಶ್ರೀ ಎಚ್.ಜಿ. ಗೋವಿಂದಗೌಡರು**

*ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಚಿವರು, ಕರ್ನಾಟಕ ಸರ್ಕಾರ*

**ಶ್ರೀ ಬಿ. ಸತ್ಯನಾರಾಯಣ**

*ಕಾರ್ಮಿಕ ರಾಜ್ಯ ಸಚಿವರು, ಕರ್ನಾಟಕ ಸರ್ಕಾರ*

**ಅಧ್ಯಕ್ಷತೆ : ಶ್ರೀ ಎಸ್. ಶಿವಣ್ಣ**

*ಶಾಸಕರು, ತುಮಕೂರು*

### ವಿಶೇಷ ಆಹ್ವಾನಿತರು

**ಶ್ರೀ ಜಿ.ಎನ್. ನಾಗಣ್ಣ**
ಅಧ್ಯಕ್ಷರು, ಜಿಲ್ಲಾ ಪಂಚಾಯತ್, ತುಮಕೂರು
**ಶ್ರೀ ಸಿ.ಎಸ್. ಭಾಸ್ಕರಪ್ಪ**
ಲೋಕಸಭಾ ಸದಸ್ಯರು, ತುಮಕೂರು
**ಶ್ರೀ ಪಿ. ಕೋದಂಡರಾಮಯ್ಯ**
ಲೋಕಸಭಾ ಸದಸ್ಯರು, ಚಿತ್ರದುರ್ಗ
**ಶ್ರೀ ಟಿ.ಎಚ್. ಜಯರಾಂ**
ಅಧ್ಯಕ್ಷರು, ತುಮಕೂರು ನಗರಸಭೆ
**ಶ್ರೀ ಅಬ್ದುಲ್ ಮುನಾಫ್,** ಅಧ್ಯಕ್ಷರು,
ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರಿ
**ಶ್ರೀ ಚೆನ್ನಿಗಪ್ಪ,** ಶಾಸಕರು, ಕೊರಟಗೆರೆ
**ಶ್ರೀ ಟಿ.ಬಿ. ಜಯಚಂದ್ರ,** ಶಾಸಕರು,ಕಳ್ಳಂಬೆಳ್ಳ
**ಶ್ರೀ ಗಂಗಹನುಮಯ್ಯ,** ಶಾಸಕರು, ಮಧುಗಿರಿ
**ಶ್ರೀ ಮುದ್ದಹನುಮೇಗೌಡರು**
ಶಾಸಕರು, ಕುಣಿಗಲ್

**ಶ್ರೀ ಡಿ. ನಾಗರಾಜಯ್ಯ**
ಶಾಸಕರು, ಹುಲಿಯೂರುದುರ್ಗ
**ಶ್ರೀ ಬಿ. ನಂಜಾಮರಿ,** ಶಾಸಕರು, ತಿಪಟೂರು
**ಶ್ರೀ ನಂಜೇಗೌಡರು,** ಶಾಸಕರು, ತುರುವೇಕೆರೆ.
**ಶ್ರೀ ಆರ್. ನಾರಾಯಣ್,** ಶಾಸಕರು, ಬೆಳ್ಳಾವಿ
**ಶ್ರೀ ಸೋಮ್ಲಾನಾಯಕ್,** ಶಾಸಕರು, ಪಾವಗಡ
**ಶ್ರೀ ಜಿ.ಎಸ್. ಶಿವನಂಜಪ್ಪ,** ಶಾಸಕರು, ಗುಬ್ಬಿ
**ಶ್ರೀ ಕೆ. ಮಲ್ಲಣ್ಣ,** ವಿಧಾನ ಪರಿಷತ್ ಸದಸ್ಯರು
**ಶ್ರೀ ಕೆ.ಸಿ. ಪುಟ್ಟಸಿದ್ದಶೆಟ್ಟಿ**
ವಿಧಾನ ಪರಿಷತ್ ಸದಸ್ಯರು
**ಶ್ರೀ ವಿ.ಎಸ್. ಉಗ್ರಪ್ಪ,** ವಿಧಾನಪರಿಷತ್ ಸದಸ್ಯರು
**ಶ್ರೀ ಜಗದೀಶ್,** ವಿಧಾನ ಪರಿಷತ್ ಸದಸ್ಯರು
**ಡಾ ವಿ.ಎಚ್. ಶಿವಯೋಗಿಸ್ವಾಮಿ**
ವಿಧಾನ ಪರಿಷತ್ ಸದಸ್ಯರು
**ಶ್ರೀ ಎನ್. ರಾಮಕೃಷ್ಣಯ್ಯ**
ತಾಲ್ಲೂಕು ಪಂಚಾಯ್ತಿ ಅಧ್ಯಕ್ಷರು, ತುಮಕೂರು

ಭಾನುವಾರ 05-01-1997 **ಪಥ ಸಂಚಲನ** ಮಧ್ಯಾಹ್ನ 2.30

**ಉದ್ಘಾಟನೆ : ಶ್ರೀ ಎಸ್.ಎನ್. ಬೋರ್ಕರ್**, ಐ.ಪಿ.ಎಸ್.
*ಅಧ್ಯಕ್ಷರು, ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು.*

**ಮುಖ್ಯ ಅತಿಥಿಗಳು : ಶ್ರೀ ಯು. ನಿಸಾರ್ ಅಹಮದ್**, ಐ.ಪಿ.ಎಸ್.
*ಜಿಲ್ಲಾ ಪೋಲೀಸ್ ಸೂಪರಿಂಟೆಂಡೆಂಟ್, ತುಮಕೂರು*

---

ಭಾನುವಾರ 05-01-1997 **ಶಾಲಾ ಮಕ್ಕಳಿಂದ ಸಾಂಸ್ಕೃತಿಕ ಕಾರ್ಯಕ್ರಮ** ಸಂಜೆ 6.30

**ಉದ್ಘಾಟನೆ : ಶ್ರೀ ಸಂಜಯ್‌ಕೌಲ್**, ಐ.ಎ.ಎಸ್. *ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ*

---

ಭಾನುವಾರ 05-01-1997 **ಶಿಬಿರಾಗ್ನಿ** ರಾತ್ರಿ 8.30

**ಉದ್ಘಾಟನೆ : ಮೇಜರ್ ಎಂ.ಆರ್. ನಾರಾಯಣ ಸಿಂಗ್**, *ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ*

---

ಸೋಮವಾರ 06-01-1997 **ವಸ್ತು ಪ್ರದರ್ಶನ ಉದ್ಘಾಟನಾ ಸಮಾರಂಭ** ಬೆಳಗ್ಗೆ 10.00

**ಉದ್ಘಾಟನೆ : ಶ್ರೀ ಎಸ್. ಮಲ್ಲಿಕಾರ್ಜುನಯ್ಯ**
*ಲೋಕಸಭಾ ಮಾಜಿ ಉಪಸಭಾಪತಿಗಳು*

**ಮುಖ್ಯ ಅತಿಥಿಗಳು : ಶ್ರೀ ಬಿ.ಎಲ್. ಶ್ರೀಧರ್**, ಐ.ಎ.ಎಸ್.
*ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಮಿನರಲ್ಸ್ ಲಿ.,*

---

ಸೋಮವಾರ 06-01-1997 **ಗೆಳೆತನದ ಆಟ** ಮಧ್ಯಾಹ್ನ 2.00

**ಮುಖ್ಯ ಅತಿಥಿಗಳು :**

**ಡಾ. ಜಿ. ಪರಮೇಶ್ವರ**, *ಮಾಜಿ ಸಚಿವರು,* **ಶ್ರೀ ಜಿ.ಎಸ್. ಬಸವರಾಜು**, *ಮಾಜಿ ಲೋಕಸಭಾ ಸದಸ್ಯರು*
**ಡಾ. ಎಂ.ಎನ್. ಚನ್ನಬಸಪ್ಪ**, *ಪ್ರಾಂಶುಪಾಲರು, ಎಸ್‌ಐಟಿ,* **ಶ್ರೀ ಶಫಿ ಅಹಮದ್**, *ಮಾಜಿ ಶಾಸಕರು,*

---

ಸೋಮವಾರ 06-01-1997 **ಜಾನಪದ ಸಾಂಸ್ಕೃತಿಕ ಪ್ರದರ್ಶನ** ಸಂಜೆ 6.00

**ಉದ್ಘಾಟನೆ :**
**ಶ್ರೀ ಪಿ.ಜಿ. ಆರ್. ಸಿಂಧ್ಯಾ**
*ಸಾರಿಗೆ ಸಚಿವರು, ಕರ್ನಾಟಕ.*

**ಮುಖ್ಯ ಅತಿಥಿಗಳು :**
**ಶ್ರೀ ಜಿ.ಎನ್. ನಾಗಣ್ಣ**
*ಅಧ್ಯಕ್ಷರು, ಜಿಲ್ಲಾ ಪಂಚಾಯತ್, ತುಮಕೂರು.*

**ಅಧ್ಯಕ್ಷತೆ :**
**ಶ್ರೀ ಲಕ್ಷ್ಮೀನರಸಿಂಹಯ್ಯ**
*ಮಾಜಿ ಸಚಿವರು*

---

ಮಂಗಳವಾರ 07-01-1997 **ಜಿಲ್ಲಾ ಸಾಂಸ್ಕೃತಿಕ ಪರಂಪರೆಯ ಪ್ರದರ್ಶನ** ಮಧ್ಯಾಹ್ನ 3.00

**ಉದ್ಘಾಟನೆ : ಡಾ. ಕೆ. ಮರುಳಸಿದ್ದಪ್ಪ**
*ಅಧ್ಯಕ್ಷರು, ಕರ್ನಾಟಕ ನಾಟಕ ಅಕಾಡೆಮಿ, ಬೆಂಗಳೂರು.*
ವಿವಿಧ ಜಿಲ್ಲೆಗಳ ಸಾಂಸ್ಕೃತಿಕ ವೈಭವದ ವಿಶೇಷ ಪ್ರದರ್ಶನ

---

ಬುಧವಾರ 08-01-1997 **ಬ್ಯಾಂಡ್ ಪ್ರದರ್ಶನ** ಮಧ್ಯಾಹ್ನ 2.30

**ಮುಖ್ಯ ಅತಿಥಿಗಳು :**

**ಶ್ರೀ ಪಿ. ಕೋಟಲಿಂಗನಗೌಡ**, ಐ.ಎ.ಎಸ್.
*ವಿಭಾಗಾಧಿಕಾರಿಗಳು, ಬೆಂಗಳೂರು ವಿಭಾಗ*

**ಶ್ರೀ ವಿ. ಅಘೋರಂ**
*ಪ್ರಧಾನ ವ್ಯವಸ್ಥಾಪಕರು, ಕೆನರಾ ಬ್ಯಾಂಕ್, ಬೆಂಗಳೂರು*

ಬುಧವಾರ 08-01-1997

## ಭವ್ಯ ಶಿಬಿರಾಗ್ನಿ

ಸಂಜೆ 6.30

**ಮುಖ್ಯ ಅತಿಥಿಗಳು :**

**ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್**
*ಕನ್ನಡ ಮತ್ತು ಸಂಸ್ಕೃತಿ ಹಾಗೂ ಪ್ರವಾಸೋದ್ಯಮ ರಾಜ್ಯ ಸಚಿವರು, ಕರ್ನಾಟಕ ಸರ್ಕಾರ*

**ಕುಮಾರಿ ತಾರಾ,**
*ಚಲನಚಿತ್ರ ನಟಿ*

**ಶ್ರೀಮತಿ ಉಮಾ ಪರಪ್ಪಸ್ವಾಮಿ**
*ಉಪಾಧ್ಯಕ್ಷರು, ಜಿಲ್ಲಾ ಪಂಚಾಯತ್, ತುಮಕೂರು.*

**ಶ್ರೀಮತಿ ಪ್ರಮೀಳ ನಾಗೇಶ್**
*ಉಪಾಧ್ಯಕ್ಷರು, ತುಮಕೂರು ನಗರಸಭೆ*

---

ಗುರುವಾರ 09-01-1997

## ಸರ್ವಧರ್ಮ ಪ್ರಾರ್ಥನಾ ಸಭೆ

ಬೆಳಿಗ್ಗೆ 7.00

**ದಿವ್ಯ ಸಾನಿಧ್ಯ :**

**ಶ್ರೀ ಶ್ರೀ ವಿರೇಶಾನಂದ ಸರಸ್ವತಿ ಸ್ವಾಮಿಗಳು**
*ರಾಮಕೃಷ್ಣ ವಿವೇಕಾನಂದ ಆಶ್ರಮ, ತುಮಕೂರು*

**ಶ್ರೀ ಹನೀಫ್ ಉಲ್ಲಾ,**
*ಜಾಮಿಯಾ ಮಸ್ಜಿದ್, ತುಮಕೂರು*

**ರೆವರೆಂಡ್ ಫಾದರ್ ಎಂ. ಆರೋಗ್ಯಸ್ವಾಮಿ,** *ಪ್ಯಾರಿಶ್ ಪ್ರೀಸ್ಟ್*

---

ಗುರುವಾರ 09-01-1997

## ಮುಕ್ತಾಯ ಸಮಾರಂಭ

ಸಂಜೆ 4.00

**ಸಮಾರೋಪ ಭಾಷಣ :**
**ಸನ್ಮಾನ್ಯ ಶ್ರೀ ಖುರ್ಷಿದ್ ಆಲಂ ಖಾನ್**
*ಘನತೆವೆತ್ತ ರಾಜ್ಯಪಾಲರು, ಕರ್ನಾಟಕ*

**ಸ್ಮರಣ ಸಂಚಿಕೆ ಬಿಡುಗಡೆ:**
**ಶ್ರೀ ಸಿದ್ಧರಾಮಯ್ಯ**
*ಉಪಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ*

**ಪ್ರಶಸ್ತಿ ಪತ್ರ ಹಾಗೂ ನೆನಪಿನ ಕಾಣಿಕೆ ವಿತರಣೆ :**
**ಶ್ರೀ ಸಿ.ಎನ್. ಭಾಸ್ಕರಪ್ಪ**
*ಲೋಕಸಭಾ ಸದಸ್ಯರು, ತುಮಕೂರು*

**ಪದಕಗಳ ವಿತರಣೆ :**
**ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ**
*ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್*

**ಅಧ್ಯಕ್ಷರು : ಶ್ರೀ ಬಿ. ಸತ್ಯನಾರಾಯಣ,** *ಕಾರ್ಮಿಕ ರಾಜ್ಯ ಸಚಿವರು ಮತ್ತು ಜಿಲ್ಲಾ ಉಸ್ತುವಾರಿ ಸಚಿವರು*

---

## ಗುರುವಾರ 09-01-1997

*ರಾತ್ರಿ 7.30 ಕ್ಕೆ*

❋ *ಸಿಡಿಮದ್ದಿನ ಪ್ರದರ್ಶನ* ❋

❋ *ಹಾಗೂ* ❋

☆★☆ *ದೀಪಗಳ ಹಬ್ಬ* ☆★☆



ರೋವರ್ಸ್



ರೋವರ್ಸ್

# ಪರಿವಿಡಿ



# ನುಡಿ ನಮನ

**ಐ.ಎಂ. ವಿಠ್ಠಲಮೂರ್ತಿ,** ಐ.ಎ.ಎಸ್.,
ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ ಹಾಗು ಅಧ್ಯಕ್ಷರು, ಜಾಂಬೂರೇಟ್,
ತುಮಕೂರು.

ಆತ್ಮೀಯರೇ,

ತುಮಕೂರಿನಲ್ಲಿ ನಡೆಯುತ್ತಿರುವ 23ನೇ ಕರ್ನಾಟಕ ರಾಜ್ಯ ಜಾಂಬೂರೇಟ್ ನನಗೊಂದು ವಿಶೇಷ ಅನುಭವ ತಂದ ಘಟನೆ. ಸುಮಾರು 8000 ಸ್ಕೌಟ್, ಗೈಡ್‌ಗಳು ಸೇರಿ ನಡೆಸಲಿರುವ ಈ ಸಮಾರಂಭದ 'ಬೃಹತ್' ಮೊದಲ ದಿನಗಳಲ್ಲಿ ಆತಂಕ ಮೂಡಿಸಿದರೂ, ತುಮಕೂರು ಜನತೆ, ಅಧಿಕಾರಿಗಳು, ಗಣ್ಯರು ನೀಡುತ್ತಾ ಬಂದ ಸಹಕಾರ ಜಾಂಬೂರೇಟ್ ನಡೆಸುವುದು ಸುಲಭ ಕೆಲಸ ಅನ್ನಿಸತೊಡಗಿತು. ಈ ಹಿನ್ನೆಲೆಯಲ್ಲಿ ಎಲ್ಲರ ಸಹಕಾರವನ್ನು ಸ್ಮರಿಸುತ್ತೇನೆ.

ಜಾಂಬೂರೇಟ್‌ನ ಸಂಪೂರ್ಣ ಯಶಸ್ಸಿಗೆ ಕಾರಣವಾಗಿರುವುದು ಡಾ॥ ಶ್ರೀ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಆಶೀರ್ವಾದ. ಜಾಂಬೂರೇಟ್‌ನ ಮಹಾಪೋಷಕರಾಗಿ ಸ್ಫೂರ್ತಿನೀಡಿದ ಅವರಿಗೆ ಭಕ್ತಿಪೂರ್ವಕ ಪ್ರಣಾಮಗಳು.

ಜಾಂಬೂರೇಟ್‌ನ ನೆನಪು ಸದಾ ಉಳಿಯುವಂತೆ ಮಾಡುವ ಉದ್ದೇಶದಿಂದ ಮೂಡಿ ಬಂದಿರುವ **'ಹಸಿರು'** ನೆನಪಿನ ಸಂಚಿಕೆ ಸಾರ್ಥಕ ಶೀರ್ಷಿಕೆ ಹೊತ್ತು ಅರ್ಥಪೂರ್ಣವಾಗಿ ಹೊರಬರುತ್ತಿರುವುದು ಹೆಮ್ಮೆಯ ವಿಷಯ. ಸಂಚಿಕೆಯ ಜವಾಬ್ದಾರಿಯನ್ನು ಹೊತ್ತು ನನ್ನ ಕೆಲಸವನ್ನು ಹಗುರಾಗಿಸಿದವರು ಸಂಪಾದಕರಾದ ಪ್ರೊ. ಎಂ. ಪ್ರಸನ್ನಕುಮಾರ್ ಮತ್ತು ಕೆ.ಎನ್. ಗೋವಿಂದರಾವ್ ತಂಡ.

**'ಹಸಿರು'** ಸಂಚಿಕೆಯ ಬೆನ್ನೆಲುಬಾಗಿ ನಿಂತಿರುವವರು ಜಾಹೀರಾತುದಾರರು ಅವರು ನೀಡಿದ ಆರ್ಥಿಕ ನೆರವು ಈ ಸಂಚಿಕೆ ಇಷ್ಟು ಸುಂದರವಾಗಿ ಹೊರಬರಲು ಸಾಧ್ಯವಾಗುತ್ತಿದೆ. **'ಹಸಿರು'** ಸಂಚಿಕೆ ಜಾಂಬೂರೇಟ್ ನೆನಪು ಸದಾ ಹಸಿರಾಗಿ ಉಳಿಯುವಂತೆ ಮಾಡುವುದೆಂಬ ಭರವಸೆ ನನಗೆ ಇದೆ. ಇದಕ್ಕಾಗಿ ಸಹಕರಿಸಿದ ಎಲ್ಲರಿಗೆ ನಮ್ಮ ಕೃತಜ್ಞತೆಗಳು.

ಈ ಸಂದರ್ಭದಲ್ಲಿ ಜಾಂಬೂರೇಟ್‌ಗಾಗಿ ವಿವಿಧ ವಿಭಾಗಗಳಲ್ಲಿ ಶ್ರಮಿಸಿದ ಇತರೆ ಗಣ್ಯರನ್ನು ಸ್ಮರಿಸುವುದು ನನ್ನ ಕರ್ತವ್ಯ. ರಾಜ್ಯ ಕಾರ್ಮಿಕ ಸಚಿವರು ಹಾಗು ಜಿಲ್ಲಾ ಉಸ್ತುವಾರಿ ಸಚಿವರೂ ಆದ ಶ್ರೀ ಬಿ. ಸತ್ಯನಾರಾಯಣರವರು, ಜಿಲ್ಲಾ ಪಂಚಾಯತ್‌ನ ಅಧ್ಯಕ್ಷರಾದ ಶ್ರೀ ಜಿ. ನಾಗಣ್ಣನವರು, ಲೋಕಸಭಾ ಸದಸ್ಯ ಶ್ರೀ ಸಿ.ಎನ್. ಭಾಸ್ಕರಪ್ಪನವರು, ಶಾಸಕರಾದ ಶ್ರೀ ಶಿವಣ್ಣನವರು ತುಮಕೂರು ನಗರ ಸಭಾ ಅಧ್ಯಕ್ಷರಾದ ಶ್ರೀ ಟಿ.ಹೆಚ್. ಜಯರಾಂರವರು ಹಾಗೂ ಜಿಲ್ಲೆಯ ಉಳಿದ ಎಲ್ಲ ಶಾಸಕರೂ, ಲೋಕಸಭಾ ಸದಸ್ಯರು ಹಾಗು ಇತರೆ ಪ್ರಜಾಪ್ರತಿನಿಧಿಗಳು ಸಂಪೂರ್ಣ ಸಹಕಾರ ನೀಡಿದ್ದಾರೆ. ಅವರೆಲ್ಲರಿಗೆ ನಾನು ಕೃತಜ್ಞ.

ಜಾಂಬೂರೇಟ್ ಯಶಸ್ವಿಯಾಗುವಲ್ಲಿ ಸರ್ಕಾರದ ಅಧಿಕಾರಿಗಳೂ ಪ್ರಮುಖ ಪಾತ್ರ ನಿರ್ವಹಿಸಿದ್ದಾರೆ. ಜಿಲ್ಲಾ ಪಂಚಾಯತ್, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಶ್ರೀ ರಾಕೇಶ್‌ಸಿಂಗ್, ಪೊಲೀಸ್ ಸೂಪರಿಂಟೆಂಡೆಂಟ್ ಶ್ರೀ ನಿಸಾರ್ ಅಹಮದ್, ಹೇಮಾವತಿ ವಿಭಾಗದ ಮುಖ್ಯ ಇಂಜಿನಿಯರ್, ಶ್ರೀ ತಿರುಮಲ, ಅಸಿಸ್ಟೆಂಟ್ ಕಮೀಷನರ್ ಶ್ರೀ ರಾಧಾಕೃಷ್ಣ, ಅಬ್ಕಾರಿ ಉಪ ಆಯುಕ್ತ ಶ್ರೀ ಸುಭಾಷ್ ಕೆ.ಷಾ, ಆಹಾರ ಇಲಾಖೆಯ ಶ್ರೀ ಗೋವಿಂದರಾಜು, ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರಾದ ಶ್ರೀ ದೊಡ್ಡ ಸಿದ್ದಪ್ಪ ಇನ್ನೂ ಮುಂತಾದವರು ಸಲ್ಲಿಸಿರುವ ಸೇವೆ ಸ್ಮರಣೀಯ.

ಜಾಂಬೂರೇಟ್‌ನ ನಿರ್ವಹಣೆಯಲ್ಲಿ ನನ್ನೊಂದಿಗೆ ಶ್ರಮಿಸಿದ ಗಣ್ಯರು ಹಲವರು. ಮಾಜಿ ಸಚಿವರಾದ ಶ್ರೀ ಲಕ್ಷ್ಮೀನರಸಿಂಹಯ್ಯ, ಹಾಗೂ ಕಾರ್ಯದರ್ಶಿಗಳಾದ ಶ್ರೀಮತಿ ಆಶಾಪ್ರಸನ್ನಕುಮಾರ್ ನಿಸ್ಪೃಹ ಸೇವೆ ಸಲ್ಲಿಸಿದ್ದಾರೆ. ಶ್ರೀಯುತರಾದ ಎನ್.ಆರ್. ಜಗದೀಶ್, ಎಂ.ಪಿ. ರಾಮಚಂದ್ರ, ಡಾ॥ ಸಿ. ಜಯರಾಮ ರಾವ್, ಬಿ.ಎನ್. ಪ್ರಸನ್ನಕುಮಾರ್, ಸುರೇಂದ್ರಷಾ, ಕಿಶೋರ್‌ಲಾಲ್, ಕೆ.ಎಸ್. ವಿಶ್ವನಾಥ, ಸಿ.ಪಿ. ಮಹದೇವಯ್ಯ, ಪತ್ರಕರ್ತ ಹೆಚ್.ಎಸ್. ರಾಮಣ್ಣ ಮುಂತಾಗಿ ಹಲವಾರು ನಾಗರೀಕ ಗಣ್ಯರು ಸೇವೆ ಸಲ್ಲಿಸಿದ್ದಾರೆ. ಅವರೆಲ್ಲರಿಗೆ ಧನ್ಯವಾದಗಳು.

ಸ್ಕೌಟ್ ಮತ್ತು ಗೈಡ್ಸ್ ರಾಜ್ಯ ಕಮಿಷನರ್ ಶ್ರೀಯುತರಾದ - ಕೊಂಡಜ್ಜಿ ಬಿ. ಷಣ್ಮುಗಪ್ಪ, ವೇಣುಗೋಪಾಲಕೃಷ್ಣ, ಕೆ.ಎಸ್. ನಂಜುಂಡಯ್ಯ, ಟಿ.ಪಿ.ಎನ್. ಮೂರ್ತಿ, ಮಹೇಶ್ ಹೊನ್ನುಡಿಕೆ, ತಿಮ್ಮಪ್ಪ, ಶ್ರೀಮತಿಯರಾದ - ಜೀವರತ್ನ, ಸರೋಜ, ಕೆ.ಎಸ್. ಕಮಲಮ್ಮ ಮುಂತಾಗಿ ನೂರಾರು ಜನ ಶ್ರಮಿಸಿದ್ದಾರೆ. ಎಲ್ಲರಿಗೆ ನಮನಗಳು.

ಪತ್ರಕರ್ತರು ಜಾಂಬೂರೇಟ್ ಯಶಸ್ಸಿನಲ್ಲಿ ಮುಕ್ತ ನೆರವು ನೀಡಿದ್ದಾರೆ. ಅವರು ನೀಡಿದ ಸಕಾಲಿಕ ಪ್ರಚಾರ ಜಾಂಬೂರೇಟ್ ಯಶಸ್ವಿಯಾಗಲು ಕಾರಣವಾಯಿತು.

ಈ ಬೃಹತ್ ಯೋಜನೆಯ ಯಶಸ್ಸು ಕೀರ್ತಿಗಳು ನಿಮ್ಮವು. ನೀವೇ ರೂಪಿಸಿ, ನೀವೇ ನಿರ್ವಹಿಸಿದ್ದೀರಿ. ಇದರಲ್ಲಿ ನನ್ನ ಪಾಲು ನಿಮ್ಮೆಲ್ಲರನ್ನು ಒಗ್ಗೂಡಿಸಿ, ಚಾಲನೆ ನೀಡಿದ್ದು ಮಾತ್ರ. ಬಹುಶಃ ಸಿದ್ಧಗಂಗೆಯ ಪ್ರಭಾವವೋ ಏನೋ, ತುಮಕೂರಿನ ಜನತೆ ಸೇವಾಮನೋಭಾವದಲ್ಲಿ ಯಾವತ್ತೂ ಹಿಂದೆ ಬಿದ್ದಿಲ್ಲ. ಆ ಪರಂಪರೆಯನ್ನು ಮುಂದಿನ ದಿನಗಳಲ್ಲಿಯೂ ಉಳಿಸಿ ಬೆಳೆಸಿಕೊಳ್ಳುವರೆಂದು ಆಶಿಸುತ್ತೇನೆ.

ತೃಪ್ತಿ ತಂದ ಕ್ಷಣಗಳಲ್ಲಿ ಹೇಳುತ್ತಲೇ ಇರಬೇಕೆನಿಸುತ್ತದೆ. ಮಾತಿಗೆ ಮೀರಿದ ಭಾವನೆಗಳನ್ನೆಲ್ಲಾ ಈ **ನುಡಿ ನಮನ**ದಲ್ಲಿ ಹಿಡಿದಿಡಲು ಸಾಧ್ಯವಾಗಿದೆಯೋ ಇಲ್ಲವೋ ಗೊತ್ತಿಲ್ಲ.

ಆದರೂ 'ವಿಶೇಷ ಅನುಭವ' ಪಡೆಯಲು ಅವಕಾಶ ಮಾಡಿಕೊಟ್ಟ ನಿಮಗೆಲ್ಲ **'ನುಡಿ ನಮನ'** ಸಲ್ಲಿಸಿ ಇಲ್ಲಿಗೆ ನಿಲ್ಲಿಸುತ್ತೇನೆ.

ಐ.ಎಂ. ವಿಠ್ಠಲಮೂರ್ತಿ



# From the desk of Jamborette Secretary

**Asha Prasanna Kumar**
Jamborette Secretary

My Dear Scouts and Guides,

It is time to look back our past and look beyond for growth and development of our movement. From Bidar Jamborette to Tumkur Jamborette a two years long journey has faced lot of challenges, achievements and events.

This Souvenir brought out on the occasion of the 23rd Karnataka Scout/ Guide Jamborette contain interesting facts on scouting and guiding and the souvenir is a tool for highlighting and reflecting images of our little world and its life. This Souvenir portrays the trials and triumphs of our Association and the persons of eminance the District produced.

I consider it a privilege and honour given to the District Association to host this Jamborette. This 23rd Karnataka State Jamborette is being held at Tumkur for the 3rd time, twice it was held during 1929 & 1956. The attendence to the Jamborettes is gradually increasing, it is expected that this number will reach 6000-7000. Arranging a very big event like this needs the active participation, help and assistance from whose unstined support has been responsible for this grand arrangement. My sincere thanks to Sri. I.M. Vittal Murthy, Deputy Commissioner and Sri Rakesh Singh, Chief Executive Officer, Z.P. for their constant encouragement and support and I also thank our Dist. Minister Mr. Satyanarayana, Mr Lakshminarasimhaiah, Mr.N.R. Jagadeesh and all the people of Tumkur, all the district officers and staffs who strived hard for the success of this Jamborette. I hope any minor lapses which are likely to be present are excused.

At this juncture, I would like to remeber and to pay my respects for two great personalities of Tumkur, late Sri. B.C. Nanjundaiah and late Sri. K.S. Shankar, who were mainly responsible for the development of scouting in Tumkur District, whose initiation, continued interest through out their life has been mainly responsible for the scouts and guides activities in Tumkur district.

I am sure that the participants will have a memorable time in the jamborette held at Tumkur.

– Asha Prasannakumar



# ಸಂಪಾದಕರ ಮಾತು

**ಪ್ರೊ. ಎಂ. ಪ್ರಸನ್ನಕುಮಾರ್**
ಮುಖ್ಯ ಸಂಪಾದಕರು

ಪ್ರಿಯ ಓದುಗರೇ,

ತುಮಕೂರಿನಲ್ಲಿ ನಡೆಯುತ್ತಿರುವ 23 ನೇ ಸ್ಕೌಟ್ ಜಾಂಬೂರೇಟ್ ಒಂದು ಐತಿಹಾಸಿಕ ಘಟನೆಯಾಗಲಿದೆ. ಕರ್ನಾಟಕದಲ್ಲಿ 3 ಬಾರಿ ಒಂದೇ ಊರಿನಲ್ಲಿ ಜಾಂಬೂರಿ ನಡೆದಿದೆ ಎಂದರೆ ಅದು ತುಮಕೂರಿನಲ್ಲಿ ಮಾತ್ರ. ಇದಕ್ಕೆ ಕಾರಣ ತುಮಕೂರು ನೀಡುತ್ತಾ ಬಂದಿರುವ ಆತ್ಮೀಯ ಸ್ವಾಗತ, ಸಹಕಾರ.

ಸೇವಾ ಮನೋಭಾವ ಬೆಳೆಸುವಲ್ಲಿ ಮಹತ್ತರ ಪಾತ್ರ ವಹಿಸುವ ಸ್ಕೌಟ್ ಮತ್ತು ಗೈಡ್ಸನ ಸೇವೆ ಬಹುಮುಖವಾದುದು. ಇಂತಹ ಸೇವಾಕಾಂಕ್ಷಿಗಳನ್ನು ರಾಜ್ಯದಾದ್ಯಂತದಿಂದ ತುಮಕೂರಿಗೆ ಕರೆಸಿಕೊಂಡು ಅವರ ಪ್ರತಿಭೆಯನ್ನು ಕಂಡು ಪ್ರೋತ್ಸಾಹಿಸಿ ಸನ್ಮಾನಿಸಿ ಕಳುಹಿಸುವುದೇ ತುಮಕೂರಿನಲ್ಲಿ ನಡೆಯುವ 23ನೇ ಸ್ಕೌಟ್ ಜಾಂಬೂರೇಟ್‌ನ ವಿಶೇಷ.

ಇಂತಹ ಐತಿಹಾಸಿಕ ಘಟನೆಯನ್ನು ಬರವಣಿಗೆಯ ಮೂಲಕ ದಾಖಲಿಸುವ ಕೆಲಸವೇ **'ಹಸಿರು'** ನೆನಪಿನ ಸಂಚಿಕೆಯದು. ಜಾಂಬೂರೇಟ್‌ನ ಧ್ಯೇಯವಾಕ್ಯ **'ಪರಿಸರವನ್ನು ಉಳಿಸಿ – ಪರಿಸರ ನಮ್ಮನ್ನು ಉಳಿಸುತ್ತದೆ'** - ಎಂಬುದರ ಕನ್ನಡಿಯಾಗಿ ಇದು ಮೂಡಿ ಬಂದಿದ್ದು, ತುಮಕೂರಿನ ಇತಿಹಾಸ-ಪ್ರಕೃತಿ, ಪರಿಸರ-ಸ್ಕೌಟ್-ಗೈಡ್, ನಡೆದು ಬಂದ ದಾರಿ, ಸ್ಕೌಟ್‌ಗಾಗಿ ಶ್ರಮಿಸಿದ ಮಹನೀಯರ ಸ್ಮರಣೆ ಇದರಲ್ಲಿನ ಲೇಖನಗಳ ತಿರುಳಾಗಿದೆ.

ಜಾಹೀರಾತುಗಳು ಓದುಗರ ಗಮನಕ್ಕೆ ತಪ್ಪದೇ ಬರಲಿ ಎಂಬ ಉದ್ದೇಶದಿಂದ ಪ್ರತಿ ಪುಟದ ಎಡ ಭಾಗದಲ್ಲಿ ಸೇರಿಸಿದ್ದೇವೆ. ನೆನಪಿನ ಸಂಚಿಕೆಗಳಲ್ಲಿ ಇದೊಂದು ಹೊಸ ಪ್ರಯೋಗ.

ಪತ್ರಿಕೆ ಸುಂದರವಾಗಿ ಮೂಡಿ ಬರುವಲ್ಲಿ ಪ್ರಧಾನ ಸಂಪಾದಕರಾದ ಜಿಲ್ಲಾಧಿಕಾರಿ ಐ.ಎಂ.ವಿಠ್ಠಲ ಮೂರ್ತಿ, ನಮಗೆ ನೀಡಿದ ಸ್ವಾತಂತ್ರ್ಯ ಬಹುಮುಖ್ಯವಾದದು. ಎಲ್ಲ ರೀತಿಯ ಸಹಕಾರ ನೀಡಿದ ಎಂ.ವಿ. ರಾಮಚಂದ್ರ, ಆಶಾ ಪ್ರಸನ್ನಕುಮಾರ್ ಅವರಿಗೆ ನಮ್ಮ ಕೃತಜ್ಞತೆಗಳು.

ಸ್ಕೌಟ್-ಗೈಡ್ಸ್‌ನ ಸಿಬ್ಬಂದಿ, ಲೇಖನ ಸಂಗ್ರಹಿಸುವಲ್ಲಿ, ಭಾವಚಿತ್ರಗಳನ್ನು ಒದಗಿಸುವಲ್ಲಿ ಸಂಪೂರ್ಣ ಸಹಕರಿಸಿದ್ದಾರೆ.

ಸಂಪಾದಕ ಮಂಡಳಿಯ ಸಂಚಾಲಕರಾದ ಕೆ.ಎನ್. ಗೋವಿಂದರಾವ್, ಸದಸ್ಯರಾದ ಕೆ.ಎಸ್.ವಿಶ್ವನಾಥ್, ಜೆ.ಆರ್. ಮಾಣಿಕ್ಯರಾಜ್, ಆರ್. ಸುಂದರರಾಜ್, ಎಂ.ಬಿ. ಸದಾಶಿವಯ್ಯ, ಡಾ|| ಎಚ್.ಎಸ್. ನಿರಂಜನಾರಾಧ್ಯ, ಕೆ.ಪಿ. ಮಹೇಶ್, ಹೆಚ್.ಎಸ್.ರಾಮಣ್ಣ, ನಾಗರಾಜ್, ಶ್ರೀಮತಿಯರಾದ ಬಾ.ಹ.ರಮಾಕುಮಾರಿ, ಶೈಲಾ ನಾಗರಾಜ್ ವಿಶೇಷವಾಗಿ ಶ್ರಮಿಸಿದ್ದಾರೆ.

ಅಕ್ಷರ ಜೋಡಣೆಯ ಜವಾಬ್ದಾರಿ ಹೊತ್ತ ಯು-ಮಾಸ್‌ನ ಡಿ.ಟಿ.ಪಿ ಸೆಂಟರ್‌ನ ಗುರುರಾಜ್, ಹರೀಶ್ ಮತ್ತು ಸಹಕರಿಸಿದ ಬೆನಕ ಡಿ.ಟಿ.ಪಿ, ತ್ವರಿತಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ಬೆಂಗಳೂರಿನ ಗೀತಾಂಜಲಿ ಮುದ್ರಣ ಇವರೆಲ್ಲರಿಗೆ ನಾವು ಆಭಾರಿಗಳು.

ಮುಖಪುಟ ರೂಪಿಸಿದ ಕಲಾವಿದರು ಶ್ರೀ ಡೇವಿಡ್ ರವರು, ಸ್ಥಿರಚಿತ್ರಣ ಒದಗಿಸಿದವರು ಅನು ಫೋಟೋ ಫ್ಲಾಷ್ ಶಾಂತರಾಜ್, ಮತ್ತು ಬಿ.ಸಿ. ಸುರೇಶ್ ಅವರು. ಇವರೆಲ್ಲರಿಗೂ ನಮ್ಮ ಕೃತಜ್ಞತೆಗಳು. ಕಾಲದ, ಕಾರ್ಯದ ಒತ್ತಡದಿಂದಾಗಿ ಸಂಚಿಕೆಯಲ್ಲಿ ಕೊರತೆಗಳು ಕಂಡುಬಂದಿದ್ದರೆ ಓದುಗರು ಮನ್ನಿಸಬೇಕಾಗಿ ಕೋರುತ್ತೇವೆ.

ವಂದನೆಗಳು,

ತಮ್ಮ ವಿಶ್ವಾಸಿ,
**ಎಂ. ಪ್ರಸನ್ನಕುಮಾರ್**

ಗುರು ನಮನ

# ಅಮರಜೀವಿ, ಎಂ.ಹೆಚ್.ಆರ್.

ವೆಂಕಟರಾಜ್
ಬಾಗ್ಲೋಡಿ, ತುಮಕೂರು.

ನಸುಗಪ್ಪು ಬಣ್ಣದ ಕೃಶಕಾಯ, ಸರಳ ಉಡಿಗೆ, ನೋವೆಲ್ಲವನ್ನು ನಗುವಿನಲ್ಲಿಯೇ ಹುದುಗಿಸಿಕೊಂಡಿರುವಂತಹ ಮುಖ, ಪರೀಕ್ಷಕ ನಯನಗಳು, ವಿರಳವಾಗುತ್ತಿರುವ ಬಿಳಿಕೇಶಕ್ಕೆ ಮಿಲ್ಟ್ರಿಕಟ್, ತುಟಿಯ ಮೇಲೆ ನೀಟಾಗಿ ಕತ್ತರಿಸಿದ ಅಚ್ಚಬಿಳಿಯ ಮೀಸೆ, ಗಂಭೀರ ಮಾತುಗಾರ. ಮಧ್ಯ ಮಧ್ಯ ಹಾಸ್ಯದ ಲೇಪನ, ಮೊದಲ ಭೇಟಿಯಲ್ಲಿಯೇ ಪ್ರಭಾವ ಬೀರುತ್ತಿದ್ದ ಮೋಡಿಕಾರ.

ಮೇಷ್ಟ್ರಿಗಿರಬೇಕಾದ ರೂಪ, ವೇಷ, ಭಾಷೆ ಎಲ್ಲವೂ ಇವರಲ್ಲಿ ಹುದುಗಿರುವಂತೆ ಭಾಸ. ಆದರೆ ಈ ವ್ಯಕ್ತಿ ಆದರ್ಶವಾದಿ - '' **ಸ್ಕೌಟ್ ರಂಗದ ದ್ರೋಣಾಚಾರ್ಯ** ''

## ಪ್ರತಿರೂಪ

ಇದಕ್ಕಾಗಿಯೇ ತನು, ಮನ, ಧನ ಎಲ್ಲಾ ಅರ್ಪಣೆ. ಬಾಳಿನ ಸೋಲು - ಗೆಲುವುಗಳಿಂದ ಎದೆಗುಂದದೆ ಆದರ್ಶವಾಗಿ ಗುದ್ದಾಡಿದ ಸಾಹಸಿ. ದಶಕಗಳ ಹಿಂದೆಯೇ ಇವರ ಆದರ್ಶಗಳನ್ನು ಕಂಡ ಅನೇಕರು ಅಂದು ಕೊಂಡಿದ್ದರು. ಈ ವ್ಯಕ್ತಿ ಕರ್ನಾಟಕದ ಸ್ಕೌಟಿಂಗ್ ಕ್ಷೇತ್ರಕ್ಕೆ ಮತ್ತೊಬ್ಬ ''ಬೇಡೆನ್ ಪೊವೆಲ್ ''ಆಗುತ್ತಾರೆ. ನಡೆನುಡಿಗಳೊಂದಿಗೆ ಸ್ಕೌಟ್ ದಿರಿಸು ಧರಿಸಿದರೆ 'ಬೇಡೆನ್ ಪೊವೆಲ್ 'ರವರ ಪ್ರತಿರೂಪ ಅಷ್ಟು ಸೌಮ್ಯತೆ. ಎಂಟು ದಶಕಗಳ ಹಿಂದೆ ಕರ್ನಾಟಕದಲ್ಲಿ ಹೆಜ್ಜೆ ಇಟ್ಟ ''ಸ್ಕೌಟ್ ಆಂದೋಳದಿಂದ ಆಕರ್ಷಿತ, ಅರ್ಪಿತ. ಸ್ವಂತ ಅನುಭವದಿಂದ ಹಿರಿ-ಕಿರಿಯರ ಸಂಘಟನೆ, ವಿಚಿತ್ರ ವಾತಾವರಣದ ಸೃಷ್ಟಿಕರ್ತ ತನ್ಮೂಲಕ'' ಮರಿ ''ಗಳ ಮನಗೆದ್ದ ರೂವಾರಿ. ಉತ್ಸಾಹವನ್ನು ಧಾರೆ ಎರೆದು ಆದರ್ಶಗಳನ್ನು ಭಟ್ಟಿ ಇಳಿಸುವುದರಲ್ಲಿ ಪರಿಣಿತ ಪ್ರಿಯ ವ್ಯಕ್ತಿ ಕೂಡ ಬಾಲ ಚಮೂ ದಳದ ಯಶಸ್ವೀ ತರಬೇತಿಗಾರ ಈ ಯಶಸ್ಸಿನಿಂದ ಸ್ಕೌಟ್ಂಗ್ ಕ್ಷೇತ್ರದಲ್ಲೊಂದು ವಿಶಿಷ್ಟಸ್ಥಾನ ಪಡೆದಿದ್ದ ವ್ಯಕ್ತಿ.

## ಎಂ. ಹೆಚ್. ಆರ್ ''

ಮಲ್ಲಸಂದ್ರ ಶ್ರೀ ಹನುಮಂತರಾಯರ ಮಗ ರಾಮಚಂದ್ರ ರಾಯರು ಸೌಟಿಂಗ್ ಕ್ಷೇತ್ರದಲ್ಲಿ ''ಎಂ.ಹೆಚ್. ಆರ್ '' ಎಂದೇ ಚಿರಪರಿಚಿತ. ಇದರೊಂದಿಗೆ 'ಮೇಷ್ಟ್ರು 'ಎಂಬ ಹೆಗ್ಗಳಿಕೆಯ ನಂಟು ಬೇರೆ. ಮಲ್ಲಸಂದ್ರ ಹನುಮಂತರಾವ್ ರಾಮಚಂದ್ರರಾವ್‌ರವರು ಬೆಂಗಳೂರು ಸಮೀಪದ ಮಲ್ಲಸಂದ್ರದ ಸಾಮಾನ್ಯ ಕುಟುಂಬದಲ್ಲಿ 5 ಮೇ 1899 ರಲ್ಲಿ ಜನಿಸಿದರು. ಶಿಕ್ಷಣ ತರಬೇತಿಯವರೆಗೆ ಮಾತ್ರ ಶಿಕ್ಷಣ. ಕಾರಣ - ಹಳ್ಳಿಯಲ್ಲಿ ವಾಸ, ಶಾಲೆದೂರ, ಸದಾಕಿತ್ತು ತಿನ್ನುವ ಕಾಯಿಲೆ ಇವೆರಡೂ 'ರಾಯರನ್ನು' ಶಾಲೆಯಲ್ಲಿ ಇರಿಸಿದ್ದು ಕಡಿಮೆ.

ದೃಢಕಾಯರಾಗಬೇಕೆಂಬ ಆಸೆ ಅಂಕುರಿಸಿದ್ದು ಬೆಂಗಳೂರಿನ S.R.N.S. ಹಿಂದು A.V. ಪಾಠಶಾಲೆಯಲ್ಲಿದ್ದಾಗಲೇ. ಆಟ ಆಡಲು ಸೇರಿಸಿದ್ದ ಸ್ನೇಹಿತರ ಸಮೂಹಕ್ಕೆ ನಾಯಕ. ಆಟದಲ್ಲಿನ ಆಸಕ್ತ ಸ್ನೇಹಿತರನ್ನು ಗಳಿಸಿಕೊಟ್ಟರೆ ನಾಯಕತ್ವ ಬೆಳೆಸಲು ಸಹಕಾರಿ. ಅಲ್ಪ ಕಾಲದಲ್ಲಿಯೇ ಪ್ರಿಯ ಜೊತೆಗಾರ.

## ಬಾಲ್ಯ

ಬಾಲ್ಯವೆಲ್ಲಾ ಹಳ್ಳಿಯಲ್ಲಿಯೇ, ಫಲ-ಪ್ರಕೃತಿಯೇ ಗುರು, ಕಷ್ಟ ಸಹಿಷ್ಣುತೆ, ಸೌಜನ್ಯತೆ, ಸೂಕ್ಷ್ಮದೃಷ್ಟಿ, ಸಹಕಾರ ಸಂಘಟನೆ, ಸಹಚಿಂತನೆ, ನರನಾಡಿಗಳಲ್ಲಿ ಆಳವಾಗಿ ಬೇರೂರಿತು. ಎಂಟು ದಶಕಗಳ ಹಿಂದೆ ಭಾರತಕ್ಕೆ ಸ್ಕೌಟಿಂಗ್ ಬಿಸಿ, ಕರ್ನಾಟಕಕ್ಕೆ ಮುಟ್ಟಿದಾಗ ಆದರ್ಶಗಳಿಂದ ಆಕರ್ಷಿತ S.R.N.S. ಹಿಂದು A.V. ಪಾಠಶಾಲೆಯೇ ಸ್ಕೌಟಿಂಗ್ ಜೀವನಕ್ಕೆ ನಾಂದಿಹಾಡಿದ ಸ್ಥಳ. ಶಾಲೆಯ ಸ್ಕೌಟ್ ಗ್ರೂಪಿನ ನಾಯಕಪಟ್ಟ, ಆದರ್ಶವಾದಿಯ ಹಾದಿಗೆ ಹೊಸತಿರುವು.

1918 ರಲ್ಲಿ ಬೆಂಗಳೂರಿನಲ್ಲಿ ಇನ್‌ಫ್ಲುಯೆಂಜಾ ಸೋಂಕಿನ ಅಬ್ಬರ. ಸ್ನೇಹಿತರೊಂದಿಗೊಡಗೂಡಿ ಚಿಕ್ಕ ಲಾಲ್‌ಬಾಗ್‌ನಲ್ಲಿ ವ್ಯವಸ್ಥೆಗೊಳಿಸಲ್ಪಟ್ಟ ಗಂಜಿ ಕೇಂದ್ರದಿಂದ ಮನೆ ಮನೆಗಳಿಗೂ ಗಂಜಿಯ ರವಾನೆ. ಸಮರ್ಥ ರೀತಿಯಲ್ಲಿ, ರಾತ್ರಿಯಲ್ಲಿ ಪೋಲೀಸರಿಗೆ ಗಸ್ತು ತಿರುಗುವಲ್ಲಿ ಜೊತೆಗಾರರು. ಈ ಸೇವೆ ಹೆಸರನ್ನು ಗಳಿಸಲು ಸಹಕಾರಿ.

**ರಾಜ್ಯ ಸ್ಕೌಟ್ ಸಂಸ್ಥೆಯ ತರಬೇತಿ ಶಿಕ್ಷಕ ಎಂಭತ್ತಾದರೂ ಕೂಡ ಸೈಕಲ್ ತುಳಿಯುತ್ತಾ ಶಿಬಿರಗಳಲ್ಲಿ ಭಾಗವಹಿಸುತ್ತಾ, ಗಿರಿಗುಡ್ಡಗಳನ್ನು ಹತ್ತಿ ಇಳಿಯುತ್ತಾ ಎಂದಿನಂತೆ ಸಂಜೆ ಹೊತ್ತಿನಲ್ಲಿ ಸ್ಕೌಟ್ ಭವನದ ಮುಂದೆ ಎಳೆಯರ ಸಮೂಹದೊಡನೆ ಹಾಜರಿರುತ್ತಿದ್ದ. ಮಾಸದ ಮುಗುಳ್ನಗೆಯ ಎಂ.ಹೆಚ್.ಆರ್.**

## ಪ್ರಪ್ರಥಮ

ಸ್ಕೌಟ್ ಆದರ್ಶಗಳನ್ನು ಉಡದಂತೆ ಹಿಡಿದ ಛಲದ ತರುಣನಿಗೆ ''ಸ್ಕೌಟಿನ ಹರಿಕಾರನಾಗುವ ಆಸೆ'' ತಪ್ಪಾಗಿದ್ದರೆ ಏನೋ ಅಪರಾಧ ಮಾಡುತ್ತಿದ್ದೇನೆಂಬ ಕಳವಳ. ಫಲಿತಾಂಶ ಬೆಂಗಳೂರಿನಲ್ಲಿ ಓಪನ್ ಯೂನಿಟ್ '' ಚಾಮುಂಡಿ ಸ್ಕೌಟ್ ಗ್ರೂಪಿಗೆ'' ಆಸ್ತಿಭಾರ 1918 ರಲ್ಲಿ. ಆ ಹೆಸರಾಂತ ಯೂನಿಟ್ ಕಳೆದ ವರ್ಷ ತಾನೆ ಅತಿ ಹಳೆಯ ಮುಕ್ತದಳದ ಪ್ರಶಸ್ತಿಯನ್ನು ರಾಷ್ಟ್ರಕಛೇರಿಯಿಂದ ಪಡೆಯಿತು. ಅಂದು 'ರಾಜ್ಯದ ಪ್ರಪ್ರಥಮ ಮುಕ್ತ ಘಟಕ'.

ಬಾಳ ಸಂಗಾತಿ ಶ್ರೀಮತಿ ಜಯಲಕ್ಷ್ಮಿಯ ತವರೂರು

ತುಮಕೂರು ಸಮೀಪದ ಬೆಳ್ಳಾವೆ, ಇದರಿಂದ 1930 ರಲ್ಲಿ ತುಮಕೂರಿನಲ್ಲಿ ಎರಡನೆಯ ಓಪನ್ ಯೂನಿಟ್ 'ಹನುಮಾನ್ ಸ್ಕೌಟ್ ಗ್ರೂಪ್' ಹುಟ್ಟು ಹಾಕಲು ಪ್ರೇರೇಪಣೆ. ಹೋದೆಡೆಯಲ್ಲೆ ಒಂದೊಂದು ಅಂಕುರ. 1940 ರಲ್ಲಿ ಮತ್ತೆ ಮೈಸೂರಿನಲ್ಲಿ ಮೂರನೆಯ ಓಪನ್ ಯೂನಿಟ್ 'ಜಯ ಸ್ಕೌಟ್ ಗ್ರೂಪ್'ನ ಸ್ಥಾಪನೆ. ಹನುಮಾನ್ ಸ್ಥಾಪಿಸಲು ಎ.ವಿ.ಸುಬ್ರಹ್ಮಣ್ಯಂ ಕಾರಣರಾದರೆ ಜಯ ಸ್ಥಾಪಿಸಲು ಹೆಚ್.ಎಸ್.ವೆಂಕಟರಾಮಯ್ಯ, ಆರ್.ಜಿ. ಪದಕಿ ನೆರವು ನೀಡಿದರು.

ಸ್ಕೌಟಿಂಗ್‌ಗಾಗಿ ಇದ್ದ ಎಲ್ಲಾ ಫಲಕಗಳನ್ನು ಬಹುಮಾನಗಳನ್ನು ತನ್ನದಾಗಿರಿಸಿಕೊಂಡು '' ಮೈಸೂರು ಮಹಾರಾಜರ ಸ್ವಂತ ಘಟಕ'' ಎಂಬ ಕೀರ್ತಿ, ಹೆಮ್ಮೆ. ಬೆಂಗಳೂರು ಚಾಮುಂಡಿ ಮತ್ತು ಮೈಸೂರು ಜಯ ಗುಂಪುಗಳದು. ಎಂ.ಹೆಚ್.ಆರ್. ರವರ ಘಟಕವೆಂದರೆ ಎಲ್ಲದರಲ್ಲೂ ಪ್ರಪ್ರಥಮ. '' ಪ್ರಥಮ ಚಿಕಿತ್ಸೆ '' ಯಲ್ಲಿ ಒಂದು ಕೈ ಮೇಲು.

ಅಂದು ನೆಟ್ಟ ಆ ಮೂರು ಸಸಿಗಳಿಗೆ ದೊರಕಿಸಿದ ನಿಷ್ಠನಾಯಕರ ಶ್ರದ್ಧಾವಂತ ನಾಯಕತ್ವ, ರಾಜಾಶ್ರಯ ಸಾರ್ವಜನಿಕರ ಪ್ರೋತ್ಸಾಹದ ಫಲ ಇಂದು ಅವು ಹೆಮ್ಮರ ಕೊಂಬೆಗಳಾಗಿ ವಿಶಾಲವಾಗಿ ಹರಡಿವೆ. ಬೇರುಗಳು ಆಳಕ್ಕಿಳಿದಿವೆ ಚಾಮುಂಡಿ 'ವಜ್ರ' ಮಹೋತ್ಸವ, ಹನುಮಾನ್ ಮತ್ತು ಜಯ 'ಚಿನ್ನ'ದ ಹಬ್ಬವನ್ನು ಆಚರಿಸಿಕೊಂಡಿವೆ. ಆಚರಿಸಲ್ಪಟ್ಟ ಮಹೋತ್ಸವಗಳಲ್ಲಿ 'ಗುರು' ಗಳ ಉತ್ಸವವನ್ನು ಮಾಡಲಾಗಿದೆ.

### ಸಾಹಿತಿ

ಸ್ಕೌಟಿಂಗ್‌ಗಾಗಿ ಸಾಹಿತ್ಯದಲ್ಲೂ ಕೈಯಾಡಿಸಿದರು ಕಿರಿಯರಿಗಾಗಿ ಸ್ಕೌಟ್ ಆಟಗಳು, ಕೋಮಲಪಾದ ಪರೀಕ್ಷೆಗಳು, ಎರಡನೆ ದರ್ಜೆಯ ಪರೀಕ್ಷೆಗಳು ಮರಿಗಳ ಪುಸ್ತಕ ಇತ್ಯಾದಿ ಮಾರ್ಗದರ್ಶಿ ಪುಸ್ತಕಗಳನ್ನು ಬರೆದರಲ್ಲದೆ ರಾಜ್ಯ ಸ್ಕೌಟ್ ಸಂಸ್ಥೆಗಾಗಿ ಬೇಡೆನ್ ಪೊವೆಲ್ ರವರ ಕೆಲವಾರು ಕೃತಿಗಳನ್ನು ಕನ್ನಡಕ್ಕಿಳಿಸಿದರು. 1929 - 60 ರವರೆಗೆ ರಾಜ್ಯ ಸ್ಕೌಟ್ ಸಂಸ್ಥೆಯಲ್ಲಿನ ವಿವಿಧ ಹುದ್ದೆಗಳಲ್ಲಿ ಸೇವೆ. 1960 - 65 ರವರೆಗೆ ರಾಜ್ಯ ಸ್ಕೌಟ್ ಸಂಸ್ಥೆಯ ಸಹಾಯಕ ಸಂಘಟನಾ ಕಮೀಷನರ್ ಆಗಿ ತುಮಕೂರು, ಚಿತ್ರದುರ್ಗ, ದಾವಣಗೆರೆ, ಶಿವಮೊಗ್ಗ, ಚಿಕ್ಕಮಗಳೂರು, ಕೋಲಾರ, ಕೆ.ಜಿ.ಎಫ್ ವಿಭಾಗಗಳಲ್ಲಿ ಸೇವೆ. ದಕ್ಷಿಣ ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲೂ ಸ್ಕೌಟ್ ಆಂಧೋಳನವನ್ನು ಹರಡಲು ಕಾರಣಕರ್ತರಾದ ಎಂ.ಹೆಚ್. ಆರ್ ರವರು ವಿಶಿಷ್ಠ ಕಾರ್ಯದಕ್ಷತೆಗಾಗಿ ಪಡೆದ ಸ್ಕೌಟ್ ಪ್ರಶಸ್ತಿಗಳು ಹಲವಾರು. ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಇವರನ್ನು ಆದರಿಸಿ ಸತ್ಕರಿಸಿದೆ. ಪ್ರಚಾರ ಬಯಸದ ಜೀವ ಎಲೆಮರೆಯ ಕಾಯಿಯಂತೆ ಜೀವನ. ಸ್ಕೌಟ್ ಕ್ಯಾಂಪ್‌ಗಳಲ್ಲಿ ಏಕೆ ಎಲ್ಲಾ ಸಮಾರಂಭಗಳಲ್ಲಿಯೂ ಎಲ್ಲಾ ಐಟಂಗಳ ಪೈಕಿ ವಿಜೃಂಭಿಸುವ 'ಮಜ್ಜಿಗೆ ಹುಳಿ 'ಯನ್ನು ಎಂ.ಹೆಚ್.ಆರ್. ಹೋಲಿಸಿದರು ಸ್ನೇಹಿತರು. ಮಜ್ಜಿಗೆ ಹುಳಿಯಂತೆಯೇ ರಾಯರು ಸರ್ವರಿಗೂ ಪ್ರಿಯರು.

### ತುಮಕೂರು ಜಿಲ್ಲೆಗಾಗಿ

ದೇಹ ಮುಪ್ಪಾದರೂ ತೆಪ್ಪಗಿರದ ಸ್ವಭಾವದ ವಯಸ್ಸು ಎಂಭತ್ತಾದರೂ ನಿಲುವು ಮಾತ್ರ ನೇರವಿದ್ದು ( He is eighty still Mighty ) ಉಕ್ಕಿ ಹರಿಯುವ ಉತ್ಸಾಹದಿಂದ, ಲವಲವಿಕೆಯಿಂದ, ಚುರುಕುತನದಿಂದ ಕಿರಿಯರನ್ನೂ ನಾಚಿಸುವಂತೆ ನಡೆದಾಡುತ್ತಿದ್ದರು. ಏಳು ದಶಕಗಳು ಸ್ಕೌಟಿಂಗ್‌ಗಾಗಿಯೇ ಅರ್ಪಿತ. ಈ ಸೇವೆಯ ಸವೆತದಲ್ಲಿ 'ನಲುವತ್ತಏಳು' ವರ್ಷಗಳ ಅಖಂಡ ಸೇವೆ ತುಮಕೂರು ಜಿಲ್ಲೆಗಾಗಿಯೇ. ಜಿಲ್ಲಾ ಸ್ಕೌಟ್ ಭವನದ ನಿರ್ಮಾಣದಲ್ಲಿ ಇವರ ಶ್ರಮಸೇವೆ ಸ್ಮರಣೀಯ. ಕಠಿಣ ಪರಿಶ್ರಮ, ನಿರಂತರ ಕಾರ್ಯ ಚಟುವಟಿಕೆಗಳ ಮುಖಾಂತರ ಇವರು ತಯಾರಿಸಿದ ಸ್ಕೌಟ್ ಸಮೂಹ ಪಡೆದ ಸುವ್ಯವಸ್ಥಿತ ಶಿಕ್ಷಣ, ಪ್ರೋತ್ಸಾಹದ ಫಲ ಇಂದು ರಾಷ್ಟ್ರದ ಸ್ಕೌಟಿಂಗ್ ನಕಾಷೆಯಲ್ಲಿ ತುಮಕೂರು ಜಿಲ್ಲೆ ಗಳಿಸಿರುವ ಗಣನೀಯ ಸ್ಥಾನ ಅನೇಕ ಪ್ರೆಸಿಡೆಂಟ್ ಸ್ಕೌಟ್ಸ್, ಗೈಡ್ಸ್‌ಗಳನ್ನು, ವಿಶ್ವ ಸ್ಕೌಟ್ ಮೇಳದ ಪ್ರತಿನಿಧಿಗಳನ್ನು ತಯಾರು ಮಾಡಿದ ಕೀರ್ತಿ ಇವರದು.

### ಜೀವ ರಕ್ಷಕ

ಸ್ಕೌಟಿನೊಂದಿಗೇ ಡ್ರೈವರ್ - ಕಂಡಕ್ಟರ್‌ಗಳಿಗಾಗಿ ಪ್ರಥಮ ಚಿಕಿತ್ಸೆಯ ಶಿಕ್ಷಣ ಭೋಧನೆಯೂ ಇವರಿಂದ 1940 ರಿಂದ 82 ರವರೆಗೆ ಸೇಂಟ್ ಜಾನ್ ಆ್ಯಂಬುಲೆನ್ಸ್ ಅಸೋಸಿಯೇಷನ್ನಿನ ಅಧಿಕೃತ ಶಿಕ್ಷಕ. ಇವರ ಸ್ವಚ್ಛ - ಸ್ಪಷ್ಟ ಮಾರ್ಗದರ್ಶನದಲ್ಲಿ ತರಬೇತಿ ಪಡೆದ ಸ್ಕೌಟ್, ಗೈಡ್ ಗಳೊಂದಿಗೆ ಚಾಲಕರ - ನಿರ್ವಾಹಕರ ಸಂಖ್ಯೆ ಸುಮಾರು ಅರ್ಧ ಲಕ್ಷಕ್ಕಿಂತಲೂ ಹೆಚ್ಚು.

### ಕಿರೀಟ

ಶಿಷ್ಯರೆಂದರೆ ಎಷ್ಟು ಹೆಮ್ಮೆ ಅಕ್ಕರೆಯೋ ಹಾಗೆಯೇ ಶಿಷ್ಯರಿಗೂ ಇವರೆಂದರೆ ಅಪಾರ ಗೌರವ, ಪ್ರೀತಿ, ದೇಶ-ವಿದೇಶಗಳಲ್ಲಿ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಜವಾಬ್ದಾರಿಯುತ ಸ್ಥಾನಗಳನ್ನು ಅಲಂಕರಿಸುವ ಶಿಷ್ಯ ಸಮೂಹ ಇವರಿಗೊಂದು ಕಿರೀಟ.

ಜಾಗೃತಿಕ ವಿಶ್ವದಲ್ಲಿನ ಹತ್ತು ಮಂದಿ ಅತ್ಯುತ್ತಮ ಛಾಯಾಗ್ರಾಹಕರಲ್ಲಿ ಓರ್ವರಾದ ಪದ್ಮಶ್ರೀ ಟಿ. ಕಾಶೀನಾಥ್, ರಾಜ್ಯ ಸರ್ಕಾರದ ಮುಖ್ಯಕಾರ್ಯದರ್ಶಿಗಳಾಗಿದ್ದ ನರಸಿಂಹರಾವ್, ಬೆಂಗಳೂರು ಕಾರ್ಪೋರೇಷನ್ನಿನ ಆಡಳಿತಾಧಿಕಾರಿ ಆಗಿದ್ದ ಶ್ರೀ ಲಕ್ಷ್ಮಣರಾವ್, ಅಖಿಲ ಭಾರತ ಯೂತ್ ಹಾಸ್ಟಲ್ ಅಸೋಸಿಯೇಷನ್ನಿನ ರಾಷ್ಟ್ರೀಯ ಕಾರ್ಯದರ್ಶಿ ಯಾಗಿದ್ದ ಶ್ರೀ ಆರ್.ಜಿ.ಪದಕಿ, ಹೆಚ್.ಎಂ.ಟಿ. ಕೈಗಡಿಯಾರ ಸಂಸ್ಥೆಯ ನಿರ್ದೇಶಕರ ಆಪ್ತಾಧಿಕಾರಿಯಾಗಿದ್ದ ಶ್ರೀ ಕೆ. ಆರ್.ಎಸ್. ಗೌಡ , ಸೆಂಟ್ರಲ್ ಬೋರ್ಡ್ ಆಫ್ ಡೈರೆಕ್ಟ್ ಟ್ಯಾಕ್ಸಸ್‌ನ ಅಧ್ಯಕ್ಷರಾಗಿದ್ದ ವಿ.ವಿ.ಬಾದಾಮಿ, ಅಮೇರಿಕಾದಲ್ಲಿರುವ ಡಾ॥ ಶಿವಕುಮಾರ್, ಎಸ್ಸಬ್ಬಲ ವಿಶ್ವವಿದ್ಯಾನಿಲಯದಲ್ಲಿ ಪ್ರೊಫೆಸರ್ ಆಗಿರುವ ಶ್ರೀಮುಕುಂದ್ ಮತ್ತು ಇನ್ನೂ ಉನ್ನತ ಹುದ್ದೆಗಳನ್ನು ಅಲಂಕರಿಸಿರುವ ಹೆಸರಾಂತ ಅಸಂಖ್ಯಾತ ಶಿಷ್ಯಕೋಟಿಯು ಇಂದು ಚೆದುರಿ ಹೋಗಿದೆ.

### ಜೀವಂತ ಗುರು

ಕಳೆದ ಮಧುರ ಕ್ಷಣಗಳು ಪಡೆದ ತರಬೇತಿ ನಿತ್ಯ ಜೀವನ - ಕಾಯಕದಲ್ಲಿ ಯಶಸ್ಸು ಹೊಂದಲು ಎಷ್ಟು ಸಹಕಾರಿಯಾಗಿದೆ ಎಂಬುದನ್ನು ವಿವರಿಸಿ ಶಷ್ಯ ಕೋಟಿಗಳು ಬರೆದ ಮಾರುದ್ದದ ಓಲೆಗಳನ್ನು ಓದುವಾಗ ಎಂ.ಹೆಚ್.ಆರ್. ರವರ ಕಣ್ಣುಗಳು ಕೃತಕೃತ್ಯತೆಯಿಂದ ಹನಿಗೂಡುತ್ತಿದ್ದವು. ಸ್ಕೌಟಿಂಗ್ ಆದರ ತತ್ವ ಅಳವಡಿಕೆ ಅನುಷ್ಠಾನ ಜೀವನಕ್ಕೊಂದು ಲವಲವಿಕೆ ತಂದು ಕೊಡುತ್ತದೆ ಎನ್ನುವುದಕ್ಕೆ ಜೀವಂತಗುರುತಾಗಿದ್ದರು ಎಂ.ಹೆಚ್.ಆರ್.

ಇವರ ಶಿಷ್ಯರೂ, ಅವರ ವಂಶದ ಪ್ರಥಮಕುಡಿಯೂ ಆದ ಶ್ರೀ

ಆರ್. ಚಂದ್ರಶೇಖರ್ ವ್ಯಾಸಂಗ ಮಾಡುತ್ತಾ 1949 - 59 ರವರೆಗೆ ಶ್ರೀಹನುಮಾನ್ ದಳದ ಸ್ಕೌಟರ್ ಆಗಿದ್ದು, 1952 ರಲ್ಲಿ ಜಿಲ್ಲೆಯ ಸಹಕಾರ್ಯದರ್ಶಿಯಾಗಿ, ರಾಷ್ಟ್ರ ಶಿಕ್ಷಣ ತಂಡದ ಸದಸ್ಯರಾಗಿ (ಎಲ್.ಟಿ.) ವೃತ್ತಿರೀತ್ಯಾ ಸರಕಾರೀ ಗೆಜಿಟೆಡ್ ಅಧಿಕಾರಿಯಾಗಿದ್ದಾಗ್ಯೂ ಕರ್ನಾಟಕದ ನಾಲ್ಕಾರು ಸುಪ್ತ ಜಿಲ್ಲೆಗಳನ್ನು ಜಾಗೃತಗೊಳಿಸಿ ರಾಜ್ಯ ಮಟ್ಟದ ಸಮಾವೇಶಗಳನ್ನು ನಡೆಸಿ ಸ್ವಯಂ ನಿವೃತ್ತಿ ಪಡೆದು (5 ವರ್ಷ ಮುಂಚೆ) ರಾಷ್ಟ್ರೀಯ ತರಬೇತಿ ಕೇಂದ್ರ, ಪಶ್ಚಿಮ ಮತ್ತು ಪೂರ್ವ ಪ್ರಾದೇಶಿಕ ಕಛೇರಿಗಳು ಹಾಗೂ ರಾಷ್ಟ್ರ ಕಛೇರಿಯಲ್ಲಿ ಕೆಲಸ ಮಾಡಿ ಇದೀಗ ರಾಜ್ಯ ಕಛೇರಿಯ ಮಾಸಪತ್ರಿಕೆಯ ಗೌರವ ಸಹ ಸಂಪಾದಕರಾಗಿರುತ್ತಾರೆ. ಸ್ಕೌಟ್ ಮತ್ತು ಗೈಡ್ ವಿಭಾಗಗಳಲ್ಲಿ ಪುಸ್ತಕಗಳನ್ನು ಅನುವಾದಿಸಿರುತ್ತಾರೆ ಹಾಗೂ ಬರೆದಿರುತ್ತಾರೆ.

### ವ್ಯಥೆ

ಸ್ಕೌಟಿಂಗ್ ಆಂಧೋಳನವನ್ನು ಇನ್ನು ವ್ಯಾಪಕವಾಗಿ ಹರಡಬೇಕಾದರೆ ಹಿಂದಿನಂತೆ ಇಂದು ಮಕ್ಕಳೊಂದಿಗೆ ತಂದೆ ತಾಯಿಗಳ ಸಾರ್ವಜನಿಕರ ಪ್ರೋತ್ಸಾಹ ಸಾಲದೆಂಬ ವ್ಯಥೆ. ಇಂದಿನ ಎಳೆಯರಲ್ಲಿ ಇಲ್ಲದ ಉತ್ಸಾಹ ಸಾಹಸ ಪ್ರವೃತ್ತಿಯೊಂದಿಗೆ ನಿಷ್ಠಾವಂತ, ಪ್ರಾಮಾಣಿಕ ಕಾರ್ಯಕರ್ತರ ಅಭಾವವೂ ಇದಕ್ಕೆ ಕಾರಣವೆಂಬ ವೈಯಕ್ತಿಕ ಅಭಿಪ್ರಾಯ ಇವರದಾಗಿತ್ತು.

ಶಾಲೆಗಳಲ್ಲಿ ಸ್ಕೌಟ್ ಮಾಸ್ಟರ್‌ಗಳು ವೈಯಕ್ತಿಕ ಆಸಕ್ತಿ ತೆಗೆದುಕೊಂಡರೆ ಈಗಾಗಲೇ ಜನಪ್ರಿಯವಾಗಿರುವ ಸ್ಕೌಟ್ ಆಂಧೋಳನಕ್ಕೆ ಮತ್ತಷ್ಟು ರಂಗೇರುತ್ತದೆ. ಎನ್ನುವ ವಿಚಾರಧಾರೆಯೂ ಇವರದಾಗಿತ್ತು. ದಳಗಳು ಇಂದಿನ ತರುಣ ಪೀಳಿಗೆಯಲ್ಲಿ ಹೆಚ್ಚುತ್ತಿರುವ ಅಶಿಸ್ತಿಗೆ ಏಕೈಕ ಪರಿಹಾರ ಮಾರ್ಗ ಇದು ಎಂ.ಹೆಚ್.ಆರ್. ರವರ ಅನುಭವದ ದೃಢ ಅನಿಸಿಕೆಯಾಗಿತ್ತು.

### ಎಂಟರಿಂದ ಎಂಭತ್ತಕ್ಕೆ

ಎಂಟರಲ್ಲಿ ಸ್ವೀಕರಿಸಿದ ಸ್ಕೌಟ್ ಪ್ರತಿಜ್ಞೆ ಬಾಳಿನೊಂದಿಗೆ ಗುದ್ದಾಡಿಯೇ ಮೇಲೆದ್ದ ಈ ಹಿರಿಯಚೇತನ ಸ್ಕೌಟಿಂಗ್‌ಗಾಗಯೇ ಇರುವ ಪ್ರಕೃತಿಯೊಂದಿಗೆ ಗೆಳೆಯನಂತೆ ಸಾಗುತ್ತಾ 83 ವರ್ಷಗಳು ಕಳೆದು 1982 ರಲ್ಲಿ ಜೀವನವನ್ನು ಜಯಿಸಿದರು.

### ಇಂದು

ತುಮಕೂರು ನಗರದ ರೈಲ್ವೆ ನಿಲ್ದಾಣದ ಹಾದಿಯಲ್ಲಿರುವ ಸ್ಕೌಟ್ ಭವನದಲ್ಲಿ ಕಾರ್ಯನಿರತ ಜಿಲ್ಲಾ ಸ್ಕೌಟ್ ಅಸೋಸಿಯೇಷನ್ನಿನ ಸಹಕಾರ್ಯದರ್ಶಿ ಜಿಲ್ಲಾ ಸೇಂಟ್‌ಜಾನ್ ಆ್ಯಂಬುಲೆನ್ಸ್ ಸಂಸ್ಥೆಯ ಕಾರ್ಯದರ್ಶಿ ರಾಜ್ಯ ಸ್ಕೌಟ್ ಸಂಸ್ಥೆಯ ತರಬೇತಿ ಶಿಕ್ಷಕ ಎಂಭತ್ತಾದರೂ ಕೂಡ ಸೈಕಲ್ ತುಳಿಯುತ್ತಾ ಶಿಬಿರಗಳಲ್ಲಿ ಭಾಗವಹಿಸುತ್ತಾ, ಗಿರಿಗುಡ್ಡಗಳನ್ನು ಹತ್ತಿ ಇಳಿಯುತ್ತಾ ಎಂದಿನಂತೆ ಸಂಜೆ ಹೊತ್ತಿನಲ್ಲಿ ಸ್ಕೌಟ್ ಭವನದ ಮುಂದೆ ಎಳೆಯರ ಸಮೂಹದೊಡನೆ ಹಾಜರಿರುತ್ತಿದ್ದ. ಮಾಸದ ಮುಗುಳ್ನಗೆಯ ಎಂ.ಹೆಚ್.ಆರ್. ಇನ್ನಿಲ್ಲವಾದರೂ, ಅವರ ಚೇತನ ಆ ಪ್ರದೇಶದಲ್ಲಿ ತನ್ನ ಪ್ರಭಾವ ವನ್ನು ಇನ್ನೂ ಬೀರುತ್ತಿದೆ.

ಎಂಭತ್ತರ ಇಳಿ ವಯಸ್ಸಿನಲ್ಲಿಯೂ ಹರೆಯದ ತರುಣನಂತೆ ಬಿಡುವಿಲ್ಲದ ಕಾರ್ಯಗಳಲ್ಲಿ ನಿರತರಾಗಿರುತ್ತಿದ್ದ ನಮ್ಮ ನೆಚ್ಚಿನ ಶ್ರೀ ಎಂ.ಹೆಚ್. ರಾಮಚಂದ್ರರಾಯರ ಭಾವಚಿತ್ರವನ್ನು ನೋಡಿದಾಗಲೆಲ್ಲಾ ರಾಬರ್ಟ್ ಫ್ರಾಸ್ಟನ ಕವಿತೆ ನೆನಪಾಗುತ್ತದೆ.

## ನಮ್ಮ ಜಿಲ್ಲೆ

### ಯಡಿಯೂರು

ವೀರಶೈವರ ಧಾರ್ಮಿಕ ಗುರು ಹಾಗೂ ಕವಿ ತೋಟದ ಸಿದ್ಧಲಿಂಗನ ಕ್ಷೇತ್ರ ಯಡಿಯೂರು. ದ್ರಾವಿಡ ಶೈಲಿಯಲ್ಲಿ ನಿರ್ಮಿತವಾಗಿರುವ ಸಿದ್ಧಲಿಂಗೇಶ್ವರ ದೇವಾಲಯದಲ್ಲಿ ಅವರ ಬೃಂದಾವನವಿದೆ. ಪ್ರತಿವರ್ಷವೂ ಮಾರ್ಚ್ ಏಪ್ರಿಲ್ ತಿಂಗಳಲ್ಲಿ ನಡೆಯುವ ಜಾತ್ರೆ ಸುಮಾರು 15 ದಿನಗಳ ಕಾಲ ಜರುಗುತ್ತದೆ. ಈ ಸಮಯದಲ್ಲಿ ಎಳೆಯಲ್ಪಡುವ ತೇರು. ಇದು ಶಿವಾರಾಧಕರ ಪ್ರಮುಖ ಯಾತ್ರಾ ಸ್ಥಳವೂ ಆಗಿದೆ.

### ಸೀಬಿ

ತುಮಕೂರು - ಸಿರಾ ಹೆದ್ದಾರಿಯಲ್ಲಿ ತುಮಕೂರಿನಿಂದ ಸುಮಾರು 30 ಕಿ.ಮೀ. ದೂರದಲ್ಲಿರುವ ಸೀಬಿಯಲ್ಲಿ ನರಸಿಂಹ ದೇವಾಲಯವು ಬಹು ಆಕರ್ಷಕವಾಗಿದೆ. ಈ ದೇವಾಲಯದ ವರ್ಣಮಯ ಪ್ರತಿಮೆಗಳು ಹಾಗೂ ವರ್ಣ ಚಿತ್ರಗಳು ಪ್ರಾಚೀನ ಮೌಲ್ಯವನ್ನು ಹೊಂದಿವೆ. ಇವು 18ನೆಯ ಶತಮಾನದವು.

ಗುರುನಮನ

# ಬಿ.ಸಿ. ನಂಜುಂಡಯ್ಯನವರು

ವೀಚಿ
ಕವಿಗಳು, ತುಮಕೂರು.

ಬಿ.ಸಿ. ನಂಜುಂಡಯ್ಯ ತುಮಕೂರು ನಗರದ ಬದುಕಿನಲ್ಲಿ ಸ್ವಾತಂತ್ರ್ಯ ಪೂರ್ವದ ಹೋರಾಟದಲ್ಲಿ ಬಹುಮುಖ್ಯವಾದ ಹೆಸರು. ಅವರು ಬೇಸಾಯಗಾರ ಕುಟುಂಬದಿಂದ ಬಂದವರು. ಬಾವಿಕಟ್ಟೆ ಚನ್ನಬಸಪ್ಪ ನಂಜುಂಡಯ್ಯನವರ ತಂದೆ ಗಾರ್ಡನ್ ರಸ್ತೆಯಲ್ಲಿನ ದಕ್ಷಿಣದ ತೋಟದ ಜಮೀನಿನಲ್ಲಿಯೇ ಮೊದಲಿನಿಂದಲೂ ಅವರ ವಾಸ. ಬಾವಿಕಟ್ಟೆ ಚನ್ನಬಸಪ್ಪನವರು ಒಳ್ಳೆಯ ಗಟ್ಟಿಮುಟ್ಟಾದ ಆಳು. ನಾವು ನೋಡುವಾಗ್ಗೆ ಸಾಕಷ್ಟು ವಯಸ್ಸಾಗಿ ಅವರು ಹೊರಗೆಲ್ಲೂ ಓಡಾಡುತ್ತಿರಲಿಲ್ಲ.

ಬಿ.ಸಿ. ನಂಜುಂಡಯ್ಯನವರದು ಮೊದಲಿನಿಂದಲೂ ಕಾಂಗ್ರೆಸ್ಸಿನ ಸ್ವಾತಂತ್ರ್ಯ ಹೋರಾಟದಲ್ಲಿ ಬಹಳ ಮುಖ್ಯ ಪಾತ್ರ. 1913ರಲ್ಲಿ ಜನಿಸಿದ ಅವರು ತಮ್ಮ ಹದಿನೆಂಟನೇ ವಯಸ್ಸಿನಲ್ಲೇ 1931ರ ಹೊತ್ತಿಗೆ ಹೆಂಡದಂಗಡಿ ಮುಂದಿನ ಅಸಹಾರ ಚಳುವಳಿ ಹಾಗೂ 1938ರ ಅರಣ್ಯ ಸತ್ಯಾಗ್ರಹ 1942ರ ಚಲೇಜಾವ್ ಚಳುವಳಿ 1947ರ ಜವಾಬ್ದಾರಿ ಸರ್ಕಾರಕ್ಕಾಗಿ ಅರಮನೆ ಚಲೋ ಚಳುವಳಿ ಮುಂತಾದ ಅತಿ ಮುಖ್ಯವಾದ ಎಲ್ಲ ಹೋರಾಟಗಳಲ್ಲಿಯೂ ಸಕ್ರಿಯವಾಗಿ ಪಾಲ್ಗೊಂಡು ಸೆರೆಮನೆ ವಾಸವನ್ನು ಅನುಭವಿಸಿ ಹೊರಬಂದ ಧೀಮಂತರು. ಗಾಂಧೀತತ್ವಗಳೇ ಅವರಿಗೆ ವೇದವಾಕ್ಯಗಳು.

1932-33ರಷ್ಟು ಹಿಂದೆಯೇ ಜಮೀನು ಅಡಮಾನ ಬ್ಯಾಂಕಿನ ಕಾರ್ಯದರ್ಶಿಯಾಗಿ ಜಿಲ್ಲಾ ಬೋರ್ಡಿನ ಸದಸ್ಯರಾಗಿ ಉಪಾಧ್ಯಕ್ಷರಾಗಿ, ತುಮಕೂರು ಪುರಸಭೆಯ ಸದಸ್ಯರಾಗಿ ಎರಡು ಮೂರು ಬಾರಿ ಪುರಸಭೆಯ ಅಧ್ಯಕ್ಷರಾಗಿ ಸಾರ್ವಜನಿಕ ಕೆಲಸ ಕಾರ್ಯಗಳಲ್ಲಿ ಭಾಗಿಯಾದ ಯಶಸ್ಸು ಅವರ ಪಾಲಿಗಿದೆ. 1948 ರಿಂದ 1957 ರವರೆಗೆ ಮೈಸೂರು ವಿಧಾನ ಸಭೆಯ ಸದಸ್ಯರಾಗಿ ಸೇವೆ ಸಲ್ಲಿಸಿದರು. ಅಲ್ಲದೆ 1957ರಿಂದ ಒಮ್ಮೆಹಾಗೂ 1960 ರಿಂದ ಇನ್ನೊಮ್ಮೆರಾಜ್ಯ ಸಭೆಯ ಚುನಾಯಿತ ಸದಸ್ಯರಾಗಿ ರಾಜ್ಯದ ರಾಜಕಾರಣದಲ್ಲಿ ತುಂಬ ಪ್ರಭಾವಶಾಲಿ ರಾಜಕಾರಣಿಯಾಗಿದ್ದದ್ದು ತುಮಕೂರಿನ ಜನತೆಯ ಮನಸ್ಸಿನಲ್ಲಿ ಇನ್ನೂ ಹಸಿರಾಗಿಯೇ ಇದೆ.

ತುಮಕೂರು ನಗರ ಮತ್ತು ತಾಲ್ಲೂಕು ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾಗಿ ಕಾಂಗ್ರೆಸ್ಸನ್ನು ಜನಮನದಲ್ಲಿ ಜೀವಂತವಾಗಿಡಲು ಅವರು ಮಾಡಿದ ಪ್ರಯತ್ನಗಳು ಸ್ಮರಣೀಯ. ಜಿಲ್ಲಾ ಹಿಂದಿ ಪ್ರಚಾರ ಸಮಿತಿಯ ಅಧ್ಯಕ್ಷರಾಗಿ ತಾವು ಬದುಕಿರುವವರೆಗೂ ಅದರ ಶ್ರೇಯಸ್ಸಿಗಾಗಿ ಕಾರ್ಯದರ್ಶಿಯವರಾದ ಯು.ವೆಂ. ವಾಸುದೇವ ರಾವ್‌ರವರ ಜೊತೆಗೂಡಿ ದುಡಿದು ಸಾವಿರಾರು ಮಂದಿ ಜಿಲ್ಲೆಯಲ್ಲಿ ಹಿಂದಿ ಕಲಿಯಲು ಬುನಾದಿ ಹಾಕಿದರು. ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳಲ್ಲಿ ನಂಬಿಕೆಯಿಟ್ಟ ಶ್ರೀ ನಂಜುಂಡಯ್ಯನವರು ಅನನ್ಯವಾದ ಕಾಂಗ್ರೆಸ್ ಕಟ್ಟಾಳು. ಸದಾ ಖಾದಿ ಧಾರಿ. ತಲೆಯ ಮೇಲೆ ಯಾವಾಗಲೂ ಖಾದಿ ಟೋಪಿ ವಿಜೃಂಭಿಸುತ್ತಿತ್ತು. ಕನ್ನಡಕಧಾರಿ ಮಧ್ಯಮ ಗಾತ್ರದ ಈ ವ್ಯಕ್ತಿಗೆ ಕರ್ನಾಟಕದ ಕಾಂಗ್ರೆಸ್ ರಾಜಕಾರಣದಲ್ಲಿ ಲೀಲಾಜಾಲ. ನಂಜುಂಡಯ್ಯನವರ ಮಾತಿಗೆ ತುಂಬಬೆಲೆ ಗೌರವಗಳಿದ್ದವು. ಅಲ್ಲಿ 1950 ಸುಮಾರಿನಲ್ಲಿರಬಹುದು ಬಾಬು ರಾಜೇಂದ್ರ ಪ್ರಸಾದ್ ತುಮಕೂರಿಗೆ ಬಂದಾಗ ಸಂತೇಮೈದಾನದಲ್ಲಿ ಸಮಾರಂಭ ಏರ್ಪಡಿಸಿ ಪೌರಮಾನ ಪತ್ರ ಅರ್ಪಿಸಿದ್ದು ಈಗ ನಡೆದಂತೆ ನನ್ನ ಮನಸ್ಸಿನಲ್ಲಿ ಅಚ್ಚೊತ್ತಿನಿಂತ ಘಟನೆಯಾಗಿದೆ.

---

**ಮಣ್ಣಿನ ಮಗನಾಗಿ ಜನಿಸಿದ ಬಿ.ಸಿ. ನಂಜುಂಡಯ್ಯ ನವರು ಪಾರ್ಲಿಮೆಂಟ್ ಕಟ್ಟೆಯನ್ನು ಏರಿದ್ದೇ ಅಲ್ಲದೆ 'ಸ್ಕೌಟ್' ಆಗಿ ಸೇವೆಸಲ್ಲಿಸಿದರು. 1949ರಲ್ಲಿ ಜಿಲ್ಲಾ ಕಮಿಷನರ್ ಆಗಿ ನೇಮಕಗೊಂಡ ಬಿ.ಸಿ.ಎನ್. 1970ರವರೆಗೆ 21 ವರ್ಷಗಳ ದೀರ್ಘಕಾಲ ಕಾರ್ಯನಿರ್ವಹಿಸಿದರು. ಅವರ ಪತ್ನಿ ಶ್ರೀಮತಿ ಅಂಬಾಬಾಯಿಯವರೂ ಗೈಡ್ಸ್ ವಿಭಾಗದಲ್ಲಿ ಸೇವೆಸಲ್ಲಿಸಿದುದು ವಿಶೇಷ.**

---

1962 ರ ಶಾರ್ವತ್ರಿಕ ಚುನಾವಣೆ ಜೆ.ಸಿ. ಭಾಗೀರಥಮ್ಮ ಸ್ಪರ್ಧಿಯಾಗಿದ್ದರು. ಊರಲ್ಲಿ ಬೀದಿ ಬೀದಿಯಮೇಲೆ ಪುರಸಭೆಯ ಸದಸ್ಯರು ಅಧ್ಯಕ್ಷರು ಕಾಂಗ್ರೆಸ್ ಕಾರ್ಯಕರ್ತರು ಎಲ್ಲರೂ ಒಟ್ಟಾಗಿ ಪ್ರಚಾರ ಮಾಡುತ್ತ ಬರುತ್ತಿದ್ದೆವು. ಮಂಡಿಪೇಟೆಯ ಸಿಮೆಂಟ್ ರಸ್ತೆಯಲ್ಲಿ ಮೆರವಣಿಗೆ ಪ್ರಚಾರ ಕೈಕೊಂಡು ಬರುತ್ತಿದ್ದಾಗ ಯಾರೋ ಕೆಲವು ರೌಡಿತರಹದ ತಿಳಿಗೇಡಿಗಳು ಗಲಾಟೆ ಮಾಡಲು ಶುರುವು

ಮಾಡಿದರು. ಮೆರವಣಿಗೆಯ ನಾಯಕತ್ವ ವಹಿಸಿದ್ದ ನಂಜುಂಡಯ್ಯನವರು ಸ್ವಲ್ಪವೂ ವಿಚಲಿತರಾಗದೆ ಆ ರೌಡಿಗಳ ಬಳಿ ಹೋಗಿ ಅವರ ರಟ್ಟೆ ಹಿಡಿದು ನಮ್ಮ ಕಾರ್ಯಕರ್ತರಿಗೇನಾದರೂ ತೊಂದರೆ ಮಾಡಿದರೆ ನಿಮ್ಮ ಗತಿನೆಟ್ಟಗಾಗುವುದಿಲ್ಲ ಹುಷಾರ್ ಎಂದು ಗದರಿದರು. ರೌಡಿಯಂತೆ ಕಾಣುತ್ತಿದ್ದ ಆ ತಿಳಿಗೇಡಿಗಳು ಬಾಲ ಮುದುರಿ ಸುಮ್ಮನೆ ಅರಗಾಗಿ ಓಡಿಹೋದರು. ಸಂದರ್ಭ ಬಂದರೆ ಬಹಳ ಧೈರ್ಯ ತೋರುವ ಎಂತಹ ಕಠಿಣ ಪರಿಸ್ಥಿತಿಯಲ್ಲೂ ನಾಯಕಗುಣ ಪ್ರದರ್ಶಿಸುವುದನ್ನು ನಂಜುಂಡಯ್ಯನವರಲ್ಲಿ ಕಾಣಬಹುದಾಗಿತ್ತು.

ತಮಗೆ ಸರಿತೋರಿದ ನಿಲವನ್ನು ತೆಗೆದುಕೊಳ್ಳುವುದು ತಮಗೆ ಬೇಕಾದವರ ಗುಣಪಕ್ಷಪಾತಿಯಾಗಿ ವರ್ತಿಸುವುದು. ನಂಜುಂಡಯ್ಯನವರು ಬದುಕಿರುವವರೆಗೆ ಸದಾ ನಿರ್ವಹಿಸುತ್ತಿದ್ದ ಕೆಲಸವಾಗಿದ್ದಿತು. ತಮ್ಮನ್ನು ನಂಬಿದವರನ್ನು ಅವರು ಕೈಬಿಟ್ಟಿದ್ದೇ ಇಲ್ಲ.

ಅವರು ಕಾರ್ಯದರ್ಶಿಯಾಗಿದ್ದಾಗ ಜಿ.ಎಂ. ಸಿದ್ಧರಾಮಣ್ಣ ಫ್ರೀ ಬೋರ್ಡಿಂಗ್ ಹೋಂನಲ್ಲಿ ನಾನು ಒಬ್ಬಿಬ್ಬರು ಬಡಹುಡುಗರ ಸಲುವಾಗಿ ನಂಜುಂಡಯ್ಯನವರಿಗೆ ಹೇಳಿ ಊಟವಸತಿ ಕೊಡಿಸಿದ ಜ್ಞಾಪಕವಿದೆ.

ಸ್ಕೌಟ್ ಚಳುವಳಿಯ ಮುಂಚೂಣಿಯಲ್ಲಿ ಸದಾ ನಂಜುಂಡಯ್ಯನವರು ಕೆಲಸ ಮಾಡುತ್ತಿದ್ದದ್ದು ಹಿಂದಿ ಪ್ರಚಾರ ಸಮಿತಿಯ ಏಳಿಗೆಗಾಗಿ ಅವರು ಹಗಲಿರುಳು ಶ್ರಮಿಸುತ್ತಿದ್ದದ್ದು ಈಗಲೂ ಕಣ್ಣಿಗೆ ಕಟ್ಟಿದ ಹಾಗೆ ನನ್ನ ಮುಂದೆ ಇರುವುದನ್ನು ನಾನು ಮರೆಯುವಂತೆಯೇ ಇಲ್ಲ.

ನಾನು ಒಂದು ಸಾರಿ ನಂಜುಂಡಯ್ಯನವರನ್ನು ಕಾಣಲು ಅವರ ಮನೆಗೆ ಹೋಗಿದ್ದೆ. ಅವರಿರಲಿಲ್ಲ ಅವರ ಶ್ರೀಮತಿಯವರಾದ ಅಂಬಮ್ಮನವರು ಇದ್ದರು. ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿ ನಂಜುಂಡಯ್ಯನವರು ಜೈಲು ಸೇರಿದ ವಿವರವನ್ನೆಲ್ಲ ಅಂಬಮ್ಮನವರು ಸಾಂಗೋಪಾಂಗವಾಗಿ ವಿವರಿಸಿದರು. ಆಗ ತಮಗಿನ್ನೂ ಚಿಕ್ಕವಯಸ್ಸು, ಚಿಕ್ಕ ಚಿಕ್ಕ ಮಕ್ಕಳು, ಬೇಸಾಯ ಇವನ್ನೆಲ್ಲಾ ಕಟ್ಟಿಕೊಂಡು ತಾವೊಬ್ಬರೇ ಈ ಒಂಟಿಮನೆಯಲ್ಲಿ ಇದ್ದ ಕಷ್ಟದ ದಿನಗಳನ್ನು ಹೇಳಿದರು. ಅವರು ತಿಳಿಸಿದ್ದೆಲ್ಲವೂ ನಿಜವಾದ ಸಂಗತಿಗಳೇ ಆಗಿದ್ದವು. ಸ್ವಾತಂತ್ರ್ಯ ಬಂದ ಮೇಲೆ ನಂಜುಂಡಯ್ಯನವರ ಸ್ಥಾನಮಾನಗಳು ಏರುತ್ತಲೇ ಹೋದವು. ದೇಶಕ್ಕಾಗಿ ಅವರು ಮಾಡಿದ ತ್ಯಾಗವನ್ನು ಗುರುತಿಸಿ ಕಾಂಗ್ರೆಸ್ ಅವರನ್ನು ಶಾಸಕರನ್ನಾಗಿ ರಾಜ್ಯಸಭಾ ಸದಸ್ಯರನ್ನಾಗಿ ಆಯ್ಕೆಮಾಡಿತು. ಮಂತ್ರಿಯಾಗಲಿಲ್ಲ ಎಂಬ ಕೊರತೆಯನ್ನು ಬಿಟ್ಟರೆ ಮಿಕ್ಕ ಎಲ್ಲ ಸುಖ ಸೌಭಾಗ್ಯಗಳೂ ಅವರ ಪಾಲಿಗೆ ಲಭ್ಯವಾದವು.

ಸ್ಕೌಟ್‌ನ ಧ್ಯೇಯವಾದ ಸೇವೆ, ಶಿಸ್ತು, ಪ್ರಾಮಾಣಿಕತೆಗಳಿಗ ತಮ್ಮನ್ನು ಅರ್ಪಿಸಿಕೊಂಡ ಅಪರೂಪ ವ್ಯಕ್ತಿ ಬಿ.ಸಿ.ಎನ್ ತುಮಕೂರಿನ ಸ್ಕೌಟ್ ಇತಿಹಾಸದಲ್ಲಿ ಅವರ ಹೆಸರು ನೆನಪಿನಲ್ಲಿ ಉಳಿಯುವಂತಹುದು. ✩

## ನಮ್ಮ ಜಿಲ್ಲೆ

### ದೇವರಾಯನ ದುರ್ಗ

ದಟ್ಟ ಗಿರಿಪಂಕ್ತಿ ಹಾಗೂ ಕೋಟೆಗಳ ನಡುವೆಯಿರುವ ದೇವರಾಯನದುರ್ಗ ತೆರೆದಿಟ್ಟ ಚಿತ್ರವಿರುವ ಅಂಚೆ ಪತ್ರದಂತಿದೆ. ದುರ್ಗದ ಮೇಲಿರುವ ದುರ್ಗಾನರಸಿಂಹನ ದೇವಾಲಯ ದ್ರಾವಿಡ ಶೈಲಿಯ ವಾಸ್ತುಶಿಲ್ಪವನ್ನು ಹೊಂದಿದ್ದು ಮೈಸೂರು ರಾಜರಿಂದ ನಿರ್ಮಿಸಲ್ಪಟ್ಟದ್ದಾಗಿದೆ. ಹನುಮಂತನಿಗೆ ಅಂಕಿತವಾಗಿರುವ ಸಂಜೀವರಾಯನ ದೇವಾಲಯ ಹಾಗೂ ಕುಂಭಿ ನರಸಿಂಹನ ದೇವಾಲಯಗಳು ಈ ದುರ್ಗದಲ್ಲಿನ ಪ್ರೇಕ್ಷಣೀಯ ಸ್ಥಳಗಳು. ನರಸಿಂಹ ದೇವಾಲಯದ ಸಮೀಪ ''ನರಸಿಂಹ ತೀರ್ಥ'', ''ಪರಾಶರ ತೀರ್ಥ'' ಹಾಗೂ ''ಪಾದ ತೀರ್ಥ'' ವೆಂಬ ಮೂರು ಪುಷ್ಕರಣಿಗಳಿವೆ. ''ಪಾದತೀರ್ಥ''ವು ದೊಡ್ಡ ಗುಹೆಯೊಳಗಿದೆ. ಮತ್ತೊಂದು ಗುಹೆಯಲ್ಲಿ ಸೀತಾ, ಲಕ್ಷ್ಮಣ ಸಮೇತನಾದ ಶ್ರೀರಾಮಚಂದ್ರನ ಮೂರ್ತಿಯಿದೆ. ಇಲ್ಲಿಗೆ ಹತ್ತಿರದಲ್ಲಿ ''ನಾಮದ ಚಿಲುಮೆ'' ಎಂಬ ನೈಸರ್ಗಿಕ ಚಿಲುಮೆಯಿದೆ. ಇದರ ಸಮೀಪದಲ್ಲಿ ಇನ್ನೂ ಹಲವಾರು ಚಿಲುಮೆಗಳಿವೆ. ಈ ಜಾಗ ಜಯಮಂಗಲಿ ಹಾಗೂ ಶಿಂಷಾ ನದಿಗಳ ಉಗಮ ಸ್ಥಾನ. ಬೇಸಿಗೆಯಲ್ಲಿ ತಂಪಾಗಿರುವ ಈ ಜಾಗ ಒಂದು ಗಿರಿಧಾಮವೂ ಹೌದು.

**ಗುರುನಮನ**

# ಕೆ.ಎಸ್. ಶಂಕರ್

## *'ಸಿಲ್ವರ್ ಎಲಿಫೆಂಟ್' ಪ್ರಶಸ್ತಿ ವಿಜೇತ*

**ಡಿ.ವಿ. ಶ್ರೀಕಾಂತ್**
ಅಧ್ಯಾಪಕರು ತುಮಕೂರು-2

''ನಹೀ ಜ್ಞಾನೇನ ಸದೃಶಂ'' ಎಂಬಂತೆ ಸುಮಾರು 4 ದಶಕದಿಂದ ತುಮಕೂರು ನಗರದ ಇತಿಹಾಸಕ್ಕೆ ''ಸರ್ವೋದಯ'' ಶಾಲೆ, ಕಾಲೇಜಿನಂತಹ ಶಿಕ್ಷಣ ಸಂಸ್ಥೆಯನ್ನು ಜನತೆಗೆ ನೀಡಿ ಕ್ರೀಡೆ, ವಿದ್ಯೆ, ಸ್ಕೌಟ್ಸ್ ಸಮಾಜ ಸೇವೆಮತ್ತು ಸಮಾನ ಧಾರ್ಮಿಕತೆಯ ರೂಪವನ್ನು ಜನತೆಯಲ್ಲಿ ಮೂಡಿಸಿ ಪ್ರತಿಯೊಬ್ಬ ಶಿಷ್ಯನ ದೇಹದಲ್ಲಿ ಸ್ಕೌಟ್ಸ್ ಭಾವನೆ ಮತ್ತು ದೇಶ ಪ್ರೇಮವನ್ನು ಬೆಳೆಸಿ **''ಬೆಳ್ಳಿ ಆನೆ''** ಪ್ರಶಸ್ತಿಯನ್ನು ಪಡೆದ ದಿಗ್ಗಜ ಶ್ರೀ ಕೆ.ಎಸ್. ಶಂಕರ್.

ಕುಣಿಗಲ್‌ನ ಶ್ರೀ ಶಿವರಾಮಯ್ಯ ಮತ್ತ ಶ್ರೀಮತಿ ಅಮ್ಮಾಯಮ್ಮ ಲಕ್ಷ್ಮೀದೇವಮ್ಮ ದಂಪತಿಗಳಿಗೆ 1922 ಜನವರಿ 18 ರಂದು ಜನಿಸಿದ ಶ್ರೀ ಶಂಕರ್ ಆಜೀವ ಪರ್ಯಂತ ಬ್ರಹ್ಮಚಾರಿಯಾಗಿದ್ದು ಮೈಸೂರು ವಿಶ್ವವಿದ್ಯಾಲಯದಿಂದ 1946 ರಲ್ಲಿ ಬಿ.ಎ., 1964 ರಲ್ಲಿ ಬಿ.ಎಡ್., ಮಾಡಿ ಶಿಕ್ಷಕರಾದರು. 1946 ರಿಂದ 1952ರ ವರೆಗೆ ಶ್ರೀ ಸಿದ್ಧಗಂಗಾ ಹೈಸ್ಕೂಲಿನಲ್ಲಿ ಸೇವೆ ಮಾಡಿ 1955 ರಲ್ಲಿ ತಮ್ಮದೇ ಆದ ಸರ್ವೋದಯ ಹೈಸ್ಕೂಲ್, ಸೋಮೇಶ್ವರ ಬಾಲಕಿಯರ ಪ್ರೌಢಶಾಲೆ 1963 ಸರ್ವೋದಯ ಜ್ಯೂನಿಯರ್ ಕಾಲೇಜ್ 1976, ಅನೇಕ ಕ್ರೀಡೆ, ಸಾಂಸ್ಕೃತಿಕ, ಸಂಸ್ಥೆಗಳ ಕರ್ತೃವಾಗಿ ಮೆರೆದು ರೋಟರಿ ಕ್ಲಬ್, ರೋಟ್ರಾಕ್ಟ್, ಸರ್ವೋದಯ ಸಂಘದ ಕಾರ್ಯದರ್ಶಿಗಳೂ, ಛೇರ್‌ಮನ್ ಆಗಿ ಕಾರ್ಯ ನಿರ್ವಹಿಸಿದರು. ಈ ವ್ಯಕ್ತಿ ಜೀವನ ಪರ್ಯಂತ ಆರೋಗ್ಯವಾಗಿದ್ದು ಉತ್ಸಾಹಿಯಾಗಿದ್ದು ದಿನಾಂಕ 10.6.96 ರಂದು ಸೋಮವಾರ ಇಹಲೋಕವನ್ನು ತ್ಯಜಿಸಿ ಪರಲೋಕವನ್ನು ಸೇರಿದರು.

**'ಸ್ಕೌಟ್ಸ್ ಎಂದರೆ ಶಂಕರ್, ಶಂಕರ್ ಎಂದರೆ ಸ್ಕೌಟ್ಸ್'** ಎಂದು ತುಮಕೂರಿಗೆ ಮಾತ್ರವಲ್ಲದೆ ಪೂರ್ಣ ಕರ್ನಾಟಕ ರಾಜ್ಯದ ಜನತೆಗೆ ತಿಳಿದಿದೆ. 1937 ರಲ್ಲಿ ಮೈಸೂರಿನ ಬನುಮಯ್ಯ ಕಾಲೇಜಿನಲ್ಲಿ ಇನ್‌ವೆಸ್ಟ್‌ಡ್ ಆಗಿ 1940-42ರ ವರೆಗೆ ಇಂಟರ್ ಮೀಡಿಯೇಟ್ ಕಾಲೇಜಿನಲ್ಲಿ ಮತ್ತು 1942 ರಿಂದ 1944ರ ವರೆವಿಗೂ ಮಹಾರಾಜಾ ಕಾಲೇಜ್ (ಮೈಸೂರು )ನಲ್ಲಿ ಸ್ಕೌಟ್ಸ್ ಸಂಚಾರಿ (ರೋವರ್) ಆಗಿ ಕಾರ್ಯ ನಿರ್ವಹಿಸಿದರು. 1946 ರಿಂದ ಒಬ್ಬ ಆದರ್ಶ ಸ್ಕೌಟರ್ ಆಗಿ ಜೀವನ ಪೂರ್ತಿ ಕಾಲ ಕಳೆದರು.

1946 ರಲ್ಲಿ ಪೂರ್ವ ಹಾಗೂ ಪ್ರಾಥಮಿಕ ಸ್ಕೌಟರ್ ಟ್ರೈನಿಂಗ್, 1964 ರಲ್ಲಿ ಪ್ರಿಲಿಮಿನರಿ ಏರ್‌ಸ್ಕೌಟ್ಸ್ ಹಾಗೂ ಪ್ರಿಲಿಮಿನರಿ ಸೀ ಸ್ಕೌಟರ್ ಟ್ರೇನಿಂಗ್ ಮುಗಿಸಿದರು. ಅಲ್ಲದೆ 1965 ರಲ್ಲಿ ಫುಡ್ ಬ್ಯಾಡ್ಜ್ ಟ್ರೈನಿಂಗ್ ಮುಗಿಸಿದರು. ಅಲ್ಲದೆ 1965 ರಲ್ಲಿ ಎ.ಎಲ್.ಟಿ. ಟ್ರೈನಿಂಗ್., ಎ.ಎಲ್.ಟಿ. ಟ್ರೈನಿಂಗ್ ಫಾರ್ ಈಸ್ಟ್ ಇಂಟರ್‌ನ್ಯಾಷನಲ್ ಟ್ರೈನಿಂಗ್, ಬೀಮ್ ಕೋರ್ಸ್ ಹಾಗೂ ಶ್ರೀ ವೆ.ವಿ. ನೀಲಕಂಠನ್ ನೇತೃತ್ವದಲ್ಲಿ ದೊಡ್ಡಬಳ್ಳಾಪುರದಲ್ಲಿ ನಡೆದ ಕಮೀಷನರ್ ಕೋರ್ಸ್‌ನ್ನು ಮುಗಿಸಿದರು. ೧೯೫೬ ರಿಂದ ೧೯೫೯ರ ವರೆಗೆ ದೊಡ್ಡಬಳ್ಳಾಪುರದಲ್ಲಿ ರಾಜ್ಯಮಟ್ಟದ ಹಾಗೂ ೧೯೭೨ ರಲ್ಲಿ ಶ್ರೀನಗರದ ರಾಷ್ಟ್ರೀಯ ಸ್ಕೌಟ್ಸ್ ತರಬೇತಿ ಶಿಬಿರದಲ್ಲಿ ಭಾಗವಹಿಸಿದ್ದರು.

ಶಂಕರ್ ನೇತೃತ್ವದಲ್ಲಿ ಸುಮಾರು ಹತ್ತು ಮೂಲಭೂತವಾದ (ಬೇಸಿಕ್) ಸ್ಕೌಟರ್ ಟ್ರೈನಿಂಗ್‌ನ್ನು ತುಮಕೂರಿನಲ್ಲಿ ನಡೆಸಿದರು. ಅಲ್ಲದೆ ಕೇಂದ್ರ ಕಛೇರಿಯವರ ಆಜ್ಞೆಯಂತೆ ದೊಡ್ಡಬಳ್ಳಾಪುರದ ಬೇಸಂಟ್ ಪಾರ್ಕ್‌ನಲ್ಲಿ ವುಡ್‌ಬ್ಯಾಡ್ಜ್ ಟ್ರೈನಿಂಗ್ ನಡೆಸಿದರು. ಇದಲ್ಲದೆ 1965 ರಿಂದ 1990ರ ವರೆಗೆ ನಡೆದ ಅನೇಕ ಮೂಲಭೂತ ಸ್ಕೌಟರ್ಸ್ ಟ್ರೈನಿಂಗ್, ಮೂರು ಬಾರಿ ಹಿಮಾಲಯನ್ ವುಡ್ ಬ್ಯಾಡ್ಜ್ ಟ್ರೈನಿಂಗ್, ಮೂರು ಕಮೀಷನರ್ ಟ್ರೈನಿಂಗ್ ಕೋರ್ಸುಗಳನ್ನು ನಡೆಸಿ ಮಾಹಿತಿಗಳನ್ನು ನೀಡುವ ಕೋರ್ಸ್‌ಗಳ ಸಹಾಯಕರಾಗಿ ಕೆಲಸ ಮಾಡಿದರು. ಇದಲ್ಲದೆ 1975 ರಲ್ಲಿ ಗೋವಾದಲ್ಲಿ ನಡೆದ ಅಡ್ವಾನ್ಸ್ ಟ್ರೂಪ್ ಸ್ಕೌಟರ್‌ನ ಸಹಾಯಕರಾಗಿ ಕಾರ್ಯನಿರ್ವಹಿಸಿದ್ದರು.

**'ಸ್ಕೌಟ್ಸ್ ಎಂದರೆ ಶಂಕರ್, ಶಂಕರ್ ಎಂದರೆ ಸ್ಕೌಟ್ಸ್'** ಎಂದು ತುಮಕೂರಿಗೆ ಮಾತ್ರವಲ್ಲದೆ ಪೂರ್ಣ ಕರ್ನಾಟಕ ರಾಜ್ಯದ ಜನತೆಗೆ ತಿಳಿದಿದೆ. ಸ್ಕೌಟ್ಸ್‌ನ ಉದ್ದೇಶಗಳಿಗೆ, ದೇಶ ಸೇವೆಗೆ ತಮ್ಮ ಜೀವನವನ್ನು ಮುಡುಪಾಗಿಟ್ಟು ಸ್ಕೌಟ್ಸ್ ಮರ್ಯಾದೆಯೊಂದಿಗೆ ಜೀವನ ಸಾಗಿಸಿದವರು, **ಕೆ.ಎಸ್. ಶಂಕರ್**

**ರ್‍ಯಾಲಿ ಜಾಂಬೊರಿಗಳಲ್ಲಿ ಸಹಭಾಗಿತ್ವ :** 1956 ರಿಂದ 1996ರ ವರೆಗೆ ಸುಮಾರು 40 ವರ್ಷಗಳಲ್ಲಿ ಅನೇಕ ರ್‍ಯಾಲಿ ಜಾಂಬೊರಿ ಜಾಂಬೋರೇಟ್‌ಗಳಲ್ಲಿ ಜಿಲ್ಲಾ ರಾಜ್ಯ ಅಂತರ ರಾಜ್ಯ ರಾಷ್ಟ್ರೀಯ ಅಂತರರಾಷ್ಟ್ರೀಯ ಮಟ್ಟದಲ್ಲಿ ಭಾಗವಹಿಸಿ ಶ್ರೀ ಶಂಕರ್‌ರವರು ತುಮಕೂರು ಸ್ಕೌಟ್ಸ್‌ನ ಕೀರ್ತಿ ಪತಾಕೆಯನ್ನು ಹಾರಿಸಿದ್ದಾರೆ.

1. ಜಿಲ್ಲಾ ಮಟ್ಟ : ತುಮಕೂರು, ಕೆ.ಜಿ.ಎಫ್., ತರೀಕೆರೆ, ಮಂಡ್ಯ, ಕೊಂಡಜ್ಜಿ, ಭದ್ರಾವತಿ.
2. ರಾಜ್ಯ ಮಟ್ಟ : ತುಮಕೂರು, ದೊಡ್ಡಬಳ್ಳಾಪುರ, ಕೊಡಗು, ಧಾರವಾಡ, ಬಳ್ಳಾರಿ, ಸಕಲೇಶಪುರ ಹಾಗೂ ಹಾಸನ.

3. **ರಾಷ್ಟ್ರಮಟ್ಟ :** ಬೆಂಗಳೂರು, ಅಲಹಾಬಾದ್, ಪಶ್ಚಿಮ ಬಂಗಾಳ, ಬಾಂಬೆ, ಹರಿಯಾಣ.

4. **ಅಂತರರಾಷ್ಟ್ರೀಯ ಮಟ್ಟ :** 29ನೆ ಜುಲೈನಿಂದ ಆಗಸ್ಟ್ 7 ರವರೆಗೆ 1975 ರಲ್ಲಿ ಯುರೋಪ್‌ನ ನಾರ್ವೆಯಲ್ಲಿ 14ನೇ ಜಾಂಬೂರಿಯಲ್ಲಿ ಭಾಗವಹಿಸಿದ್ದರು.

5. **ವಿಶ್ವ ಸಮ್ಮೇಳನ :** 1975 ರಲ್ಲಿ ಡೆನ್ಮಾರ್ಕ್‌ನ ಕೊಪೆನ್ ಹೆಗೆನ್‌ನಲ್ಲಿ ನಡೆದ ವಿಶ್ವಸಮ್ಮೇಳನದಲ್ಲಿ ಭಾರತದ ಪ್ರತಿನಿಧಿಯಾಗಿದ್ದರು.

ದಿII ಕೆ.ಎಸ್. ಶಂಕರ್‌ರವರು ಸ್ಕೌಟಿಂಗ್ ಮತ್ತು ಗೈಡಿಂಗ್ ಸ್ವರ್ಗ ಎಂದೇ ಪರಿಗಣಿಸಲಾದ ಪ್ರಪ್ರಥಮ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರವಿರುವ ಲಂಡನ್ನಿನ ''ಗಿಲ್‌ಪಿಲ್ ಪಾರ್ಕ್''ಗೆ ಸಹ ಭೇಟಿ ನೀಡಿದ್ದರು.

**ಸ್ಕೌಟ್ಸ್ ಪದಕ ಹಾಗೂ ಬಿರುದು :** ಒಂದು ಬಾರಿ ರಾಷ್ಟ್ರಪತಿ ಪುರಸ್ಕಾರವನ್ನು ಪಡೆದರು. ಇದಲ್ಲದೆ ಸ್ಕೌಟಿಂಗ್‌ನಲ್ಲಿ ನೀಡಲ್ಪಡುವ ಅತ್ಯುನ್ನತ ಪ್ರಶಸ್ತಿಯಾದ ''ಸಿಲ್ವರ್ ಎಲಿಫೆಂಟ್'' ಅವಾರ್ಡ್ ಪಡೆದ ಜಿಲ್ಲೆಯ ಏಕೈಕ ವ್ಯಕ್ತಿಯಾಗಿ ಮೆರೆದವರು ಶ್ರೀಯುತ ಶಂಕರ್‌ರವರು.

ಇದಲ್ಲದೆ ತುಮಕೂರು ಸ್ಕೌಟ್ಸ್ ಚಳುವಳಿಯ ಜಿಲ್ಲಾ ಜಂಟಿ ಕಾರ್ಯದರ್ಶಿಯಾಗಿ, ಜಿಲ್ಲಾ ಆಯುಕ್ತರಾಗಿ ಹಾಗೂ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಸದಸ್ಯರಾಗಿ ಜೀವನ ಪರ್ಯಂತ ಕಾಲ ಕಳೆದರು.

1963 ರಲ್ಲಿ ಜಿಲ್ಲಾ ಮಟ್ಟದಲ್ಲಿ ಗೃಹರಕ್ಷಕ ದಳದ ಕರ್ತೃವಾಗಿ ಒಂಭತ್ತು ತಾಲ್ಲೂಕಿನಲ್ಲಿ ಇದರ ಲಘು ಭಾಗಗಳನ್ನು ಪಸರಿಸಿದರು. ಇದಲ್ಲದೆ ಸೇವಾ ದಳದಲ್ಲಿಯೂ ಸಹ 1949 ರಿಂದ 1954ರ ವರೆಗೂ ಕೆಲಸ ಮಾಡಿದರು. 1963 ರಲ್ಲಿ ಸೆಂಟ್ ಜಾನ್ ಅಂಬ್ಯೂಲೆನ್ಸ್ ತರಬೇತಿ ಸಂಸ್ಥೆಯ ಕಾರ್ಯದರ್ಶಿಯೂ ಆಗಿದ್ದರು. ತುಮಕೂರಿನಲ್ಲಿ ನಡೆದ 1956ರ ರಾಜ್ಯ ಸ್ಕೌಟ್ ಜಾಂಬೋರಿಯ ಯಶಸ್ಸಿಗೆ ಸಹಕರಿಸಿದ್ದರು.

ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಕಾರ್ಯದರ್ಶಿ, ಜಿಲ್ಲಾ ಕಾರ್ಯದರ್ಶಿ, ಜಿಲ್ಲಾ ಆಯುಕ್ತ ಮತ್ತು ಪೀಠಾಧ್ಯಕ್ಷರಾಗಿ (ಛೇರ್ಮನ್), ರಾಜ್ಯ ಸಂಸ್ಥೆಯ ಸದಸ್ಯರಾಗಿದ್ದರು. ರಾಜ್ಯ ತರಬೇತಿ ಆಯುಕ್ತರಾಗಿಯೂ ಸೇವೆ ಸಲ್ಲಿಸಿದ್ದರು.

ಭಾರತದ ರಾಷ್ಟ್ರಪತಿಗಳಿಂದ ಪುರಸ್ಕೃತರಾದ ಸಾವಿರಾರು ಸ್ಕೌಟ್ಸ್ ಗೈಡ್ಸ್‌ಗಳನ್ನು ತಯಾರಿ ಮಾಡಿದ್ದರು. ರಾಜ್ಯದ ತರಬೇತಿ ಆಯುಕ್ತರಾಗಿ ಸಾವಿರಾರು ಮಂದಿ ವಯಸ್ಕ ಮುಖಂಡರು ವಿಶೇಷವಾಗಿ ನಾಯಕ ತರಬೇತುದಾರರನ್ನು ಅವರು ಸಿದ್ಧಗೊಳಿಸಿದರು. ಜೊತೆಗೆ ಸಾವಿರಾರು ಹೆಚ್.ಡಬ್ಲ್ಯೂ.ಬಿ. ಹೊಂದಿದವರನ್ನು ರೂಪಿಸಿದರು.

ಸ್ಕೌಟ್ಸ್‌ನ ಉದ್ದೇಶಗಳಿಗೆ, ದೇಶ ಸೇವೆಗೆ ತಮ್ಮ ಜೀವನವನ್ನು ಮುಡುಪಾಗಿಟ್ಟು ಸ್ಕೌಟ್ಸ್ ಮರ್ಯಾದೆಯೊಂದಿಗೆ ಪರಲೋಕವನ್ನು ಸೇರಿದ ದಿII ಕೆ.ಎಸ್. ಶಂಕರ್‌ರವರು 23ನೇ ರಾಜ್ಯ ಸ್ಕೌಟ್ಸ್-ಗೈಡ್ಸ್ ಜಾಂಬೊರೇಟ್ ಸಂದರ್ಭದಲ್ಲಿ ಇಂತಹ ಮಹಾನ್ ವ್ಯಕ್ತಿ, ಪುರುಷೋತ್ತಮ ನಮ್ಮೊಂದಿಗೆ ಇಲ್ಲವೆಂಬುದು ವಿಷಾದದ ಸಂಗತಿ.

ಎಲ್ಲರೂ ಸೇರಿ 23ನೇ ಜಾಂಬೊರೇಟ್‌ನ್ನು ಯಶಸ್ವಿಗೊಳಿಸುವುದರ ಮೂಲಕ ಇವರಿಗೆ ಗೌರವವನ್ನು ಶ್ರದ್ಧಾಂಜಲಿಯನ್ನು ಅರ್ಪಿಸೋಣ.

**''ಸ್ಕೌಟ್ಸ್ ಬೆಳೆಸೋಣ - ನಾಗರೀಕತೆ ಉಳಿಸೋಣ''**

ಜೈ ಹಿಂದ್

---

## ಶ್ರೀವಾಣಿ

*ಮನುಷ್ಯ ತಪ್ಪನ್ನು ಮಾಡಿಯೇ ಮಾಡುತ್ತಾನೆ. ಅದು ಸಹಜವಾದುದು. ಆದರೆ ದೊಡ್ಡವರ ಜೀವನದಲ್ಲಿ ಕಾಣುವ ವೈಶಿಷ್ಟ್ಯವೆಂದರೆ ಅವರು ಮಾಡಿದ ತಪ್ಪನ್ನು ಮುಚ್ಚುವುದಿಲ್ಲ. ಜನತೆಯ ಮುಂದೆ ಅಪರಾಧಗಳನ್ನು ಬಿಚ್ಚಿ ಹೇಳಿ, ದೊಡ್ಡವರ, ದೇವರ ಕ್ಷಮಾಪಣೆ ಕೇಳಿ ಮತ್ತೆ ಅದೇ ತಪ್ಪುಗಳು ತಮ್ಮ ಬದುಕಿನಲ್ಲಿ ಸಂಭವಿಸದಂತೆ ಎಚ್ಚರಿಕೆಯನ್ನು ವಹಿಸುತ್ತಾರೆ. ಅವರು ಜೀವನದಲ್ಲಿ ಮೇಲೆದ್ದು ಬುದ್ಧರಾಗುತ್ತಾರೆ. ಆದರೆ ನಾವು ನಮ್ಮ ತಪ್ಪುಗಳನ್ನು ಒಪ್ಪಿಕೊಳ್ಳುವುದು ಅಗೌರವ ಎಂದು ಭಾವಿಸಿ ಪಾತಾಳಕ್ಕೆ ಬೀಳುತ್ತೇವೆ. ಮತ್ತೆ ನಾವು ಮೇಲೇಳುವುದಿಲ್ಲ. ಜೀವನದಲ್ಲಿ ಜಜ್ಜಿ ಹೋಗುತ್ತೇವೆ.*

**- ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು**

ಇಷ್ಟಲ್ಲದೆ ಪಾಳೆಯಗಾರರು ಆಳಿದ ಅರಸರುಗಳ ಕೊಡುಗೆಯಾಗಿ ಹೆಬ್ಬೂರು ಹಲವಾರು ದೇವಾಲಯದ ಆಗರವೆನಿಸಿಕೊಂಡಿರುವುದಲ್ಲದೆ ಅಲ್ಲಿನ ವರದರಾಜ ಸ್ವಾಮಿ, ಪಾವಗಡದ ಕಣಿವೆ ನರಸಿಂಹ, ತುಮಕೂರು ನಗರದ ಲಕ್ಷ್ಮಿಕಾಂತ ದೇವಾಲಯ, ಕೈದಾಳದ ಚನ್ನಕೇಶವ ಅಲ್ಲದೆ ಶೀಬಿ ನರಸಿಂಹ ದೇವಾಲಯದಲ್ಲಿನ ವರ್ಣಚಿತ್ರಗಳು ಈ ಭೂಮಿಯ ವಾಸ್ತುಶಿಲ್ಪ ಸಂಸ್ಕೃತಿಯ ಸೊಬಗಿನ ತಾಣಗಳಾಗಿ ಇತಿಹಾಸದ ಪುಟಗಳಲ್ಲಿ ರಂಜಿಸುತ್ತಿವೆ.

## ಧಾರ್ಮಿಕ ಸಂಸ್ಕೃತಿಯಲ್ಲಿನ ಸಮನ್ವಯತೆ

ಸರ್ವಧರ್ಮ ಸಮನ್ವಯ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಬಂದಿರುವ ಇಲ್ಲಿನ ಆಳರಸರು, ಪ್ರಜೆಗಳು, ಧರ್ಮಕರ್ಮನಿಷ್ಠರು. ಇಸ್ಲಾಮಿಕ್ ಶೈಲಿಯಲ್ಲಿನ ದರ್ಗಾಗಳು, ಹೆಬ್ಬೂರು, ಚಿಕ್ಕನಾಯಕನಹಳ್ಳಿಯ ತಾತಯ್ಯನಗೋರಿ, ತುಮಕೂರಿನಲ್ಲಿರುವ ಜುಮ್ಮಾಮಸೀದಿ, ಶಿರಾದ ಮಲ್ಲಿಕ್‌ರಿಹಾನನ ದರ್ಗಾ ಅಷ್ಟಲ್ಲದೆ ಕ್ರೈಸ್ತ ಧರ್ಮದವರೊಂದಿಗಿರುವ ಸ್ನೇಹ ಸಾಮರಸ್ಯದ ಕುರುಹಾಗಿ ಇಲ್ಲಿನ ವೆಸ್ಲಿ ದೇವಾಲಯ, ಗುಬ್ಬಿಯಲ್ಲಿನ ಪ್ರಪ್ರಥಮ ಪ್ರಾಚೀನ ಮೆಥಾಡಿಸ್ಟ್ ಚರ್ಚು ಕ್ರೈಸ್ಥ ಧರ್ಮದ ವಾಸ್ತುಶಿಲ್ಪ ಶೈಲಿಯಲ್ಲಿ ನಿರ್ಮಿತವಾಗಿವೆ. ಜಿನದೇವಾಲಯಗಳು ಈ ಜಿಲ್ಲಾದ್ಯಂತ ನೂರಾರು ಕಾಣ ಬರುತ್ತವೆ. ಹಿಂದೂ ವಾಸ್ತುಶಿಲ್ಪದ ವೈಶಿಷ್ಟ್ಯದೊಂದಿಗೆ ಇತರೆ ಧರ್ಮದವರ ವಾಸ್ತುಶಿಲ್ಪಶೈಲಿ ತುಮಕೂರು ಜಿಲ್ಲೆಯ ಕಲಾ ವೈಭವಕ್ಕೆ ಪೋಷಕವಾಗಿರುವುದು ನಿಜಕ್ಕೂ ಶ್ಲಾಘನೀಯ.

## ಜಾನಪದ ಜಾಣರ ಜಗುಲಿಯಿದು

ಈ ಸುಜನಜನಪದ ಕಲಾ ದೇಗುಲದಲ್ಲಿ ಕಲಾ ಸರಸ್ವತಿಯ ಕರಸೇವಕರಾಗಿ ನಿಂತ ಜಾನಪದ ಜಾಣರು, ಕೀರ್ತನಕಾರರು, ಸಂಗೀತ ವಿದ್ವನ್ಮಣಿಗಳು, ಗಮಕಿಗಳು ಈ ಜಿಲ್ಲೆಯ ಕಲಾಸಂಸ್ಕೃತಿಯನ್ನ್ನೆ ಕರ್ನಾಟಕದ ಇತಿಹಾಸಕ್ಕೆ ಕೊಡುಗೆಯಾಗಿತ್ತಿದ್ದಾರೆ.

ಮಾನವನ ಬದುಕಿನ ಅಂತರಾಳದಲ್ಲಿ ಹುದುಗಿರುವ ನೋವು ನಲಿವು, ಬದುಕಿನ ತತ್ವ, ಗ್ರಾಮೀಣ ಸಂಸ್ಕೃತಿ ಪರಿಸರದ ಪ್ರಕೃತಿಯ ಮಡಿಲಲ್ಲೇ ನಿಂತು ರಚಿಸಿದ ಜಾನಪದ ಜಾಣರು ಅನಾಮಿಕ ಕವಿಗಳು, ನಿಂತಲ್ಲಿ ಕುಂತಲ್ಲಿ ಹಾಡಿದ ಆಶುಕವಿಗಳು, ಕೀರ್ತಿಗೆ , ಹೆಸರಿಗಾಗಿ ಅಬ್ಬರ ಮಾಡಿದವರಲ್ಲ. ಜಾನಪದ ಸೊಗಡನ್ನು ಗೀತೆಗಳ ಮೂಲಕ ಕಲಾಪ್ರದರ್ಶನಗಳ ಮೂಲಕ ಹಂಚಿದ ಹರಿಕಾರರು ಈ ಜಾನಪದ ಕಲಾವಿದರು.

ವಿಶಿಷ್ಟವಾಗಿ ಇಲ್ಲಿ ಬೆಳೆದು ಬಂದಿರುವ ಜಾನಪದ ಕಲಾ ಸಂಸ್ಕೃತಿಯಲ್ಲಿ ಪ್ರಮುಖವಾದ ಕಲೆಗಳು ಇವು. ಧರ್ಮಗುರುವಿನ ಆಗಮನದ ಸಂಕೇತವಾಗಿ ನುಡಿಸುವ ಕರಡೆ ನಗಾರಿ, ಶುಭ ಸಂಕೇತವಾಗಿ ಹೆಣ್ಣು ದೇವತೆಗಳನ್ನು ಹೊಂಬಾಳೆಯಿಂದ ಶೃಂಗರಿಸುವ ಹೊಂಬಾಳೆ ಕಳಶ, ಚಾಮುಂಡಿಯಿಂದ ಶಾಪಗ್ರಸ್ಥರಾಗಿ ಜಾನಪದದಲ್ಲೇ ಉಳಿದ ವೀರಹುತಾತ್ಮರಾದ ಕೆಂಚಣ್ಣ ಕರಿಯಣ್ಣ ಹೆಸರಿನಲ್ಲಿನ ಕಲೆ ಸೋಮನ ಕುಣಿತ. ರೇಣುಕೆ ಯಲ್ಲಮ್ಮನ ಕಥೆ ಹೇಳುವ ಚೌಡಿಕೆ. ಜನ ಸಾಮಾನ್ಯರು ಸಾಮರಸ್ಯದಲ್ಲಿ ನಲಿದು ಆಡುವ ಹಾಡುವ ಕೋಲಾಟ, ಹಾಗಲವಾಡಿ ಜುಂಜಪ್ಪ ಗಣೆ, ಕರಪಾಲಮೇಳ, ಗೀಗಿಪದ, ಸೋಬಾನೆಪದಗಳು, ಗೊರವನ ಕುಣಿತ, ಹುಲಿವೇಷ, ಡೊಳ್ಳುವಾದ್ಯ ನುಡಿತ, ಪಂಡರಿಭಜನೆ, ತೊಗಲುಬೊಂಬೆ ಕುಣಿತ, ಮೂಡಲಪಾಯ ಯಕ್ಷಗಾನ ಕಲೆಯನ್ನು ವೀರಗಾಸೆ ಕುಣಿತ ಕಲೆಯನ್ನು ಮೈಗೂಡಿಸಿ ಕೊಂಡು ಬಂದ ಕಲಾವಿದರು, ಜಾನಪದ ಕಲೆಯ ಸಂಸ್ಕೃತಿಯನ್ನು ಇಂದಿಗೂ ಜೀವಂತವಾಗಿ ಉಳಿಸಿಕೊಂಡು ಬರುತ್ತಿದ್ದಾರೆ. ಈ ಜಿಲ್ಲೆಯ ಕಲೆ ರಾಷ್ಟ್ರ ಮಟ್ಟದಲ್ಲಿ ಮಿಂಚಲು ನಮ್ಮ ಜಾನಪದ ಕಲಾವಿದರು ಕಾರಣೀಭೂತರು.

## ಲಲಿತ ಕಲೆಗಳ ಆಗರ

ಲಲಿತ ಕಲೆಗಳ ಲಾವಣ್ಯಭೂಮಿ. ರಂಗಭೂಮಿಯ ಕಲಾವಿದರಿಗೆ, ಗಾಯಕರಿಗೆ, ನರ್ತಕರಿಗೆ, ಕೀರ್ತನಕಾರರಿಗೆ ನೆಲೆ ನೀಡಿರುವ ಈ ಸುಜನಜನಪದ ನಾಡು ಮಹಾನ್ ಕಲಾವಿದರನ್ನು ತನ್ನ ಗರ್ಭಾಂಬುಧಿಯಿಂದ ನೀಡಿದೆ. ಇಡೀ ಭಾರತದಲ್ಲೇ ಅಗ್ರಮಾನ್ಯ ಗಳಿಸಿದ ಗುಬ್ಬಿ ವೀರಣ್ಣನವರ ಕಂಪನಿಯಾದ ಚನ್ನಬಸವೇಶ್ವರ ನಾಟಕ ಮಂಡಲಿ, ಚಿಕ್ಕನಾಯಕನ ಹಳ್ಳಿಯ ಚಂದ್ರಮೌಳೇಶ್ವರ ಕೃಪಾಪೋಷಿತ ನಾಟಕ ಸಭಾ, ತುಮಕೂರಿನ ಸೀತಾರಾಮಯ್ಯನವರ ಸೀತಾ ಮನೋಹರ ನಾಟಕ ಮಂಡಲಿ, ಹೆಚ್.ಎನ್. ಶರ್ಮಾರವರ ಇಂದಿರಾ ಲಲಿತ ಕಲಾ ಸಂಘ, ಹೊನ್ನುಡಿಕೆಯ ನಟರಾಜ ಆರ್ಟ್ಸ ಥಿಯಟ್ರಿಕಲ್ ನಾಟಕ ಕಂಪನಿಗಳು ನೂರಾರು ನಾಟಕ ಕಲಾವಿದರನ್ನು ಕಲಾಪ್ರಪಂಚಕ್ಕೆ ಕೊಡುಗೆಯಾಗಿ ಕೊಟ್ಟಿದೆ. ಈ ಕಲಾ ಕಂಪನಿಯ ಮಡಿಲಲ್ಲಿ ಬೆಳೆದ ಕಲಾವಿದರು ರಂಗಭೂಮಿಯಲ್ಲೇ ಅಲ್ಲದೆ ಚಿತ್ರರಂಗದಲ್ಲೂ ಮಿಂಚಿದ ಮಹಾನುಭಾವರಾಗಿರುವರಲ್ಲದೆ ರಾಷ್ಟ್ರಮಟ್ಟದಲ್ಲೂ ಮಿಂಚಿರುವರು. ಈ ಕಂಪನಿಗಳಿಂದ ಹೊರಹೊಮ್ಮಿ ಬಂದ ಕಲಾ ಪುಷ್ಪಗಳು ನೂರಾರು.

ಕರ್ನಾಟಕ ಸಂಗೀತದ ದಿಗ್ಗಜಗಳಾಗಿ ಮೆರೆದವರು ನೃತ್ಯ ಪಟುಗಳು, ಹವ್ಯಾಸಿಕಲೆಗಾರರು, ಕೀರ್ತನಕೇಸರಿಗಳಾಗಿ, ಗಮಕಿಗಳಾಗಿ ಬೆಳೆದ ಕಲಾವಿದರು ತುಮಕೂರು ಜಿಲ್ಲೆಯ ಕಣ್ಮಣಿಗಳೇ ಅಲ್ಲದೆ ಕರ್ನಾಟಕದ ಕಲಾಶಿರೋಮಣಿಗಳಾಗಿ ರಂಜಿಸಿ ಸಂಗೀತಕಲಾ ಸಂಸ್ಕೃತಿಯನ್ನು ಬೆಳೆಸಿ ಉಳಿಸಿಕೊಂಡು ಬರುತ್ತಿರುವುದು ಪುಣ್ಯವೇ ಸರಿ. ಈ ಸುಜನಜನಪದ ಭೂಮಿಯೆನಿಸಿರುವತುಮಕೂರು ಜಿಲ್ಲೆ ಕರ್ನಾಟಕದ ಕಲಾ ಸಂಸ್ಕೃತಿಯ ಉಜ್ವಲತೆಗೆ ಶ್ರೇಯಾಕಾಂಕ್ಷಿಯಾಗಿ ಕರ್ನಾಟಕದ ಇತಿಹಾಸದಲ್ಲಿ ಸಾಂಸ್ಕೃತಿಕ ಪರಂಪರೆಯನ್ನೇ ನೀಡಿರುವುದು ನಮ್ಮೆಲ್ಲರ ಪುಣ್ಯ. ಈ ಸುಸಂಸ್ಕೃತ ಭೂಮಿಯಲ್ಲಿ ಹುಟ್ಟಿ ಬೆಳೆದ ನಾವೆಷ್ಟು ಧನ್ಯರು ! ಮಾನ್ಯರು! ❑

### ನಮ್ಮ ಜಿಲ್ಲೆ

**ಮಾರ್ಕೋನ ಹಳ್ಳಿ**

ಕುಣಿಗಲ್‌ನಿಂದ 25ಕಿ.ಮೀ. ದೂರದಲ್ಲಿರುವ ಮಾರ್ಕೋನ ಹಳ್ಳಿಯಲ್ಲಿ ಶಿಂಷಾ ನದಿಗೆ ಅಣೆಕಟ್ಟು ನಿರ್ಮಿಸಲಾಗಿದೆ. 1939 ರಲ್ಲಿ ನಿರ್ಮಿಸಲ್ಪಟ್ಟ ಈ ಅಣೆಕಟ್ಟು 1942 ರಲ್ಲಿ ಕೃಷಿ ಗ್ರಾಮವೊಂದರ ಉದಯಕ್ಕೆ ಕಾರಣವಾಯಿತು. ಇದನ್ನು ಆಧುನಿಕ ಮಾದರಿಯಲ್ಲಿ ನಡೆಸಲಾಗುತ್ತಿತ್ತು.

ವಿವಿಧ ಜಿಲ್ಲೆಗಳಿಂದ ವಿವಿಧ ಊರುಗಳಿಂದ ಬಂದಿರುವ, ಈ ಮೊದಲು ಪರಿಚಯವಿಲ್ಲದ ಸ್ಕೌಟ್‌ಗಳು ಒಂದೇ ಕಡೆ ಒಂದೇ ಗುಡಾರದಲ್ಲಿ ಕೆಲವು ದಿವಸಗಳ ಕಾಲ ವಾಸಿಸಿ ಸಹ ಭೋಜನ ನಡೆಸಿ, ಚಟುವಟಿಕೆಗಳಲ್ಲಿ ಭಾಗವಹಿಸಿ ಸಹಬಾಳ್ವೆಯ ಮೊದಲ ಪಾಠಗಳನ್ನು ಕಲಿಯುತ್ತಾರೆ.

ಪರಮಸಹಿಷ್ಣುತೆಯು ನಮ್ಮ ದಿಯ ಬದುಕಿಗೆ ಅತ್ಯಂತ ಮಹತ್ವದ ಅಂಶ ಈ ಗುಣವು ಜಾಂಬೋರೇಟ್‌ಗಳಲ್ಲಿ ತಾನೇ ತಾನಾಗಿ ಬೆಳೆಯುತ್ತದೆ. ವಿವಿಧ ಜಾತಿಗಳ, ವಿವಿಧ ಧರ್ಮಗಳ, ವಿವಿಧ ಕೋಮುಗಳ ಬಾಲಕರು ಒಂದೇ ಕಡೆ ಕಲೆತು ಸಹೋದರರಂತೆ ಬಾಳುತ್ತಾರೆ. ಹಿಂದೂಗಳು, ಕ್ರೈಸ್ತರು, ಮುಸಲ್ಮಾನರು, ಹೀಗೆ ಎಲ್ಲಾ ಧರ್ಮದವರೂ ತಮ್ಮ ತಮ್ಮ ಸಂಕುಚಿತ ಭಾವನೆಗಳನ್ನು ಒಟ್ಟು ಒಂದಾಗಿ ಇರುವುದನ್ನು ಕಲಿಯುತ್ತಾರೆ. ಎಲ್ಲಾ ಧರ್ಮದವರೂ ಸೇರಿ ಒಂದೇ ವೇದಿಕೆಯ ಮೇಲೆ ಪ್ರಾರ್ಥನೆ ಸಲ್ಲಿಸುವ ಸರ್ವ ಧರ್ಮ ಪ್ರಾರ್ಥನೆಯಿಂದ ಕೋಮು ಸೌಹಾರ್ದತೆ ಬೆಳೆಯುತ್ತದೆ.

ಶಿಸ್ತು ಬದ್ಧ ಜೀವನ ನಡೆಸುವುದನ್ನು ಸ್ಕೌಟ್‌ಗಳು ಇಲ್ಲಿ ಕಲಿಯುತ್ತಾರೆ. ಪ್ರಾತಃಕಾಲದ ವ್ಯಾಯಾಮದಿಂದ ಪ್ರಾರಂಭಿಸಿ ರಾತ್ರಿ ಮಲಗುವವರೆಗೆ ಪ್ರತಿ ಕಾರ್ಯಕ್ರಮವೂ ಸಹ ಗಡಿಯಾರದ ಮುಳ್ಳಿನಂತೆ ಕ್ಲುಪ್ತ ವೇಳೆಗೆ ನಡೆಯುತ್ತದೆ. ಎಲ್ಲಾ ಸ್ಕೌಟ್‌ಗಳೂ ಅದಕ್ಕೆ ಬದ್ಧರಾಗಿರಬೇಕು. ಪೆಟ್ರೋಲ್ ಪದ್ಧತಿಯ ಅನುಷ್ಠಾನದಿಂದ ಶಿಸ್ತು ವೃದ್ಧಿಯಾಗುತ್ತದೆ. ಪ್ರತಿ ಕೆಲಸದಲ್ಲೂ, ಶಿಸ್ತು, ಕ್ರಮಬದ್ಧತೆ ಅಚ್ಚುಕಟ್ಟುತನ ಇದ್ದಾಗಲೇ ಬದುಕು ಆನಂದದಿಂದ ಎಂಬುದನ್ನು ಮನಗಾಣುತ್ತಾರೆ.

ಮೇಲೆ ತಿಳಿಸಿದ ಎಲ್ಲಾವು ಬಾಲಕರ ದೃಷ್ಟಿಯಿಂದ ಇದ್ದರೂ ಸಹ ಅವು ಜಾಂಬೋರೇಟ್‌ನಲ್ಲಿ ಭಾಗವಹಿಸುವ ವಯಸ್ಕ ನಾಯಕರಿಗೂ ಸಹ ಅನ್ವಯಿಸುತ್ತದೆ. ಬಾಲಕರಿಂದಾಗಿ ಇಂತಹ ಹಿರಿದಾದ, ಚಟುವಟಿಕೆಗಳಿಂದ ಕೂಡಿದ ಶೈಕ್ಷಣಿಕವಾದ ಒಂದು ಮೇಳವನ್ನು ಸಂಘಟಿಸುವಾಗ ಅದಕ್ಕಾಗಿ ನಡೆಸುವ ಪೂರ್ವ ಸಿದ್ಧತೆ ಕಾರ್ಯಗತಿಗೊಳಿಸುವಿಕೆ, ಭಾಗವಹಿಸುವಿಕೆ, ಮೇಲ್ವಿಚಾರಣೆ ನಿರ್ದೇಶನ ಇತ್ಯಾದಿ ಹಂತಗಳಲ್ಲಿ ವಯಸ್ಕ ನಾಯಕರು ಸ್ಕೌಟ್ ಬಾಲಕರೊಂದಿಗೆ ಸ್ಕೌಟಿಂಗನ್ನು

''ಒಂದು ಆಟವಾಗಿ ಆಡುತ್ತಾರೆ

ಒಂದು ಶಿಕ್ಷಣವಾಗಿ ಕಲಿಯುತ್ತಾರೆ

ಒಂದು ಬದುಕುವ ವಿಧಾನವಾಗಿ ಬದುಕುತ್ತಾರೆ.''

ಇಂತಹ 23ನೇ ಜಾಂಬೋರೇಟ್ ಅನ್ನು ನಡೆಸುತ್ತಿರುವ ತುಮಕೂರು ಜಿಲ್ಲೆ ಈ ವಿಷಯದಲ್ಲಿ ಅನೇಕ ಪ್ರಥಮಗಳನ್ನು ಕಂಡ ಜಿಲ್ಲೆಯಾಗಿದೆ.

ನಮ್ಮ ರಾಜ್ಯ ಸಂಸ್ಥೆಯಲ್ಲಿದ್ದ ಹಿರಿಯ ಸ್ಕೌಟರ್ ದಿ| ಡಾ| ಎಸ್.ಬಿ. ಕೌಶಿಕ್‌ರವರ ಒಂದು ಲೇಖನದಲ್ಲಿ ಈ ಅಂಶಗಳೂ ಮೂಡಿ ಬಂದಿವೆ.

'' ಜಾಂಬೋರಿ '' ಎಂಬ ಪದವನ್ನು ಬಳಸಿ ಪ್ರಥಮ ಬಾರಿಗೆ ರಾಜ್ಯ ಜಾಂಬೋರಿಯನ್ನು ಸಂಘಟಿಸಿದ ಕೀರ್ತಿ ತುಮಕೂರು ಜಿಲ್ಲೆಯದು. ಅದುವರೆವಿಗೂ ಮೇಳ ಎಂಬ ಪದ ಬಳಸಲಾಗುತಿತ್ತು. ( 5-3-86 ರಿಂದ 11-3-86 ) ಪ್ರಥಮ ಬಾರಿಗೆ ಸ್ಕೌಟ್‌ಗಳೊಂದಿಗೆ ಗೈಡ್‌ಗಳೂ ಸಹ ಆ ಜಾಂಬೋರಿಯಲ್ಲಿ ಭಾಗವಹಿಸಿದ್ದರು. ಅದುವರೆವಿಗೂ ಗೈಡ್‌ಗಳಿಗೆ ಈ ಮೇಳಗಳಲ್ಲಿ ಅವಕಾಶವಿರಲಿಲ್ಲ.

ಪ್ರಥಮ ಬಾರಿಗೆ ಜಾಂಬೋರಿಯಲ್ಲಿ ಸ್ಮರಣ ಸಂಚಿಕೆ ಹೊರತರುವ ಸಂಪ್ರದಾಯವನ್ನು ಆ ಜಾಂಬೋರಿಯಲ್ಲಿ ಪ್ರಾರಂಭಿಸಲಾಯಿತು.

ಜಾಂಬೋರಿಯ ಬಗ್ಗೆ ಬೆಡೆನ್ ಪೊವೆಲ್ಲರು ಹೇಳಿರುವ ಮಾತುಗಳು ಇಲ್ಲಿ ಉದ್ಧರಣೀಯ.

'' ಒಬ್ಬ ಬಾಲಕನ ಸರಾಸರಿ ಸ್ಕೌಟ್ ಜೀವನ ಕಡಿಮೆ ಅವಧಿಯದು ಪ್ರತಿ ತಲೆಮಾರಿನ ಸ್ಕೌಟ್‌ಗಳು ಕನಿಷ್ಠ ಒಂದು ದೊಡ್ಡ ರ್‍ಯಾಲಿಯನ್ನು ನೋಡುವುದು ಉತ್ತಮ. ಏಕೆಂದರೆ ಆ ಬಾಲಕನು ನಿಜವಾಗಿಯೂ ಹಿರಿಯ ಸೋದರತ್ವದ ಸದಸ್ಯನಾಗಿರುವುದನ್ನು ಅಲ್ಲಿ ಮನಗಾಣುತ್ತಾನೆ. ಅವನ ನೂತನ ಸ್ಕೌಟಿಂಗ್ ವಿಧಾನಗಳನ್ನು ಶಿಬಿರವಾಸದ ಉಪಕರಣಗಳನ್ನು ಕಲಿಯುತ್ತಾನೆ ಹಾಗೂ ಅನುಭವದಿಂದ ಒಬ್ಬ ಉತ್ತಮ ಸ್ಕೌಟ್ ಆಗುತ್ತಾನೆ, ಮತ್ತು ಸಹ ಸ್ಕೌಟರ್‌ಗಳಲ್ಲಿ ತಂಡ ಕಾರ್ಯದ ಬೆಳವಣಿಗೆ ಮತ್ತು ಸಂಘಟನಾ ಕ್ಷಮತೆ ಬೆಳೆಸುವಲ್ಲಿ ಇಂತಹ ರ್‍ಯಾಲಿಗಳು ಅತ್ಯಂತ ಮಹತ್ವವಾದವುಗಳು. ಇದರಿಂದ ಸ್ಕೌಟಿಂಗ್ ಮಟ್ಟ ಸಾಕಷ್ಟು ಉನ್ನತಿಗೇರುತ್ತದೆ.

ನಮ್ಮ ತರಬೇತಿಯ ವಿಧಾನಗಳು ಹಾಗೂ ಫಲಿತಾಂಶಗಳ ಈ ಪ್ರದರ್ಶನಗಳಿಂದ ಸಾರ್ವಜನಿಕರಲ್ಲಿ ನಮ್ಮ ಕಾರ್ಯದ ಬಗ್ಗೆ ನೈಜ ಅನುಕಂಪ ಹಾಗೂ ತಿಳುವಳಿಕೆ ಮೂಡುತ್ತದೆ. ''

**ಅಡಿ ಟಿಪ್ಪಣಿ:** ಮೊದ ಮೊದಲೂ ಸ್ಕೌಟ್‌ಗಳ ಎಲ್ಲಾ ಮೇಳಗಳನ್ನು '' ಜಾಂಬೋರಿ '' ಎಂತಲೂ ಕರೆಯುತ್ತಿದ್ದರು. ಈಗ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದ ಮೇಳಗಳನ್ನು ' ಜಾಂಬೋರಿ ' ಎಂತಲೂ ರಾಜ್ಯ ಮಟ್ಟದ ಹಾಗೂ ವಿಭಾಗ ಮಟ್ಟದ ಮೇಳಗಳನ್ನು ' ಜಾಂಬೋರೇಟ್ ' ಎಂತಲೂ ಕರೆಯುತ್ತಾರೆ. ☐

## ನಮ್ಮ ಜಿಲ್ಲೆ

### ಸಿದ್ಧಗಂಗಾ

ಬಸವಾ (ನಂದಿ) ರೂಢನಾಗಿರುವ ಸಿದ್ಧಲಿಂಗೇಶ್ವರ ದೇವಾಲಯವನ್ನು ಹೊಂದಿರುವ ಸಿದ್ಧಗಂಗ ಕ್ಷೇತ್ರವು ಯಾತ್ರಾ ಸ್ಥಳವೂ ಆಗಿದೆ. ಈ ದೇವಾಲಯದ ಪ್ರವೇಶ ದ್ವಾರದಲ್ಲಿ ಆರು ಗುಡಿಗಳನ್ನು ಕಾಣಬಹುದಾಗಿದೆ. ಈ ದೇವಾಲಯದ ಸಮೀಪದಲ್ಲಿ ರಮಣೀಯ ನಿಸರ್ಗದ ಮಡಿಲಲ್ಲಿ ವೀರಶೈವರ ಮಠವೊಂದು ಸ್ಥಾಪಿತವಾಗಿದೆ. ಈ ಮಠದ ವತಿಯಿಂದ ಪ್ರತಿ ನಿತ್ಯವೂ ಸಹಸ್ರಾರು ವಿದ್ಯಾರ್ಥಿಗಳು ಹಾಗೂ ಯಾತ್ರಿಕರಿಗೆ ಅನ್ನದಾನ ಮಾಡಲಾಗುತ್ತದೆ. ಇದು ಒಂದು ಪ್ರಮುಖ ವಿದ್ಯಾ ಕೇಂದ್ರವಾಗಿದೆ.

ತುಮಕೂರು ಜಿಲ್ಲೆಯಲ್ಲಿ 1918ರಿಂದ ಈವರೆಗೆ ಸ್ಕೌಟಿಂಗ್ ಮತ್ತು ಗೈಡಿಂಗ್ ಸಾಗಿ ಬಂದಿರುವ 78 ವರ್ಷಗಳ ಇತಿಹಾಸವನ್ನು ಅವಲೋಕಿಸಿದರೆ, ಅದು ಸಾಧಿಸಿರುವ ಪ್ರಗತಿಯು ಚೇತೋಹಾರಿಯಾಗಿದೆ. ಅದನ್ನು ಕಂಕಣ ಕಟ್ಟಿ ಬೆಳೆಸಿದ ಪದಾಧಿಕಾರಿಗಳ ನಿಸ್ವಾರ್ಥ ಭಾವನೆ, ಕಾರ್ಯತತ್ಪರತೆ, ಅರ್ಪಣಾ ಭಾವನೆ ಮತ್ತು ದೂರದರ್ಶಿತ್ವಗಳು ಸ್ಫೂರ್ತಿಯನ್ನು ನೀಡಿ ಕಾರ್ಯೋನ್ಮುಖರನ್ನಾಗಿಸಿದೆ.

1) ತುಮಕೂರಿನಲ್ಲಿ ಜಿಲ್ಲೆಯು ರಾಷ್ಟ್ರಮಟ್ಟದ ವರೆಗೂ ತನ್ನ ಪ್ರಭಾವವನ್ನು ಬೀರಿರುವುದನ್ನು ಈ ಕೆಳಕಂಡ ಎರಡು ನಿದರ್ಶನಗಳಿಂದ ಕಾಣಬಹುದು. 1939ರಲ್ಲಿ '' ಸ್ಕೌಟಿಂಗ್ ಇನ್ ಇಂಡಿಯ '' ಎಂಬ ಗ್ರಂಥವನ್ನು ಬರೆದು, ಜಿಲ್ಲೆಗೂ, ನಾಡಿಗೂ ಕೀರ್ತಿ ತಂದವರು ಶ್ರೀ. ಸಿ ಸುಬ್ಬರಾವ್ ರವರಾದರೆ, ಆ ಪುಸ್ತಕವನ್ನು ಪ್ರಕಟಪಡಿಸಿದ್ದು ನಮ್ಮ ತುಮಕೂರು ಜಿಲ್ಲೆ ಸ್ಕೌಟ್ ಸಮಿತಿ.

2) ನಮ್ಮ ತುಮಕೂರು ಜಿಲ್ಲೆಯ ಜಿಲ್ಲಾ ಕಮಿಷನರ್ (ಸ್ಕೌಟ್) ಶ್ರೀ ಬಿ.ಸಿ. ನಂಜುಂಡಯ್ಯನವರು ಎಂ.ಪಿ. ಆಗಿದ್ದ ಅವದಿಯಲ್ಲಿ ಸ್ಕೌಟ್, ಗೈಡ್ ಸಂಸ್ಥೆಗಳ ''ವಿಲೀನತಾ ಸಮಿತಿಯ'' ಸದಸ್ಯರೂ ಆಗಿದ್ದರು. ''ಬಾರತ್ ಸ್ಕೌಟ್ ಮತ್ತು ಗೈಡ್ಸ್'' ಎಂಬ ಹೆಸರು ಬರಲು ಪ್ರಮುಖ ವಕ್ತಾರರಾಗಿದ್ದರು. 1950 ನವಂಬರ್‌ನಲ್ಲಿ ಅಂತಿಮ ವಿಲೀನತಾ ಸಭೆಯು ಬೆಂಗಳೂರಿನಲ್ಲಿ ನಡೆಯಲು ಕಾರಣ ಕರ್ತರಾಗಿದ್ದರು.

### ಜಿಲ್ಲಾ ಸಂಸ್ಥೆಗೊಂದು ನೆಲೆ

ಶ್ರೀ ಕೃಷ್ಣರಾಜೇಂದ್ರ ಟೌನ್ ಹಾಲ್‌ನ ಎಡ ಮೂಲೆಯ ಕೋಣೆಯಲ್ಲಿ ಸರ್ಕಾರಿ ಹೈಸ್ಕೂಲ್ ಹಾಸ್ಟೆಲ್‌ನ ಕೋಣೆಗಳಲ್ಲಿ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು ( ಜಿಲ್ಲಾ ಬೋರ್ಡ್ ಕಟ್ಟಡ - ಇಂದಿನ ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು) ಆವರಣದ ಗ್ಯಾರೇಜು ಮತ್ತು ಅದಕ್ಕೆ ಹೊಂದಿಕೊಂಡ ಕೋಣೆಯಲ್ಲಿ ಜಿಲ್ಲಾ ಸಂಸ್ಥೆಯು 1952ರವರೆಗೆ 28 ವರ್ಷಗಳ ಕಾಲ ತನ್ನ ಕಾರ್ಯನಿರ್ವಹಿಸಿತು.

1946 - 48ರ ಅವಧಿಯಲ್ಲಿ , ಜಿಲ್ಲಾ ಸಮಿತಿಯ ಉಪಾಧ್ಯಕ್ಷರಾಗಿದ್ದ ಶ್ರೀ ಎಂ.ವಿ.ರಾಮರಾವ್ ಅವರ ಅಶಯ ಹಾಗೂ ಪ್ರಚೋದನೆಗಳಿಗೊಳಗಾಗಿ ಪ್ರಾರಂಭವಾದ ಸಲಹೆಯು, ಶ್ರೀ ಬಿ. ಸಿ. ನಂಜುಂಡಯ್ಯನವರ ಮುಂದಾಳತ್ವದಲ್ಲಿ ಒಂದು ರೂಪ ತಾಳಿತು. ಡೆಪ್ಯುಟಿ ಕಮಿಷನರೂ, ಜಿಲ್ಲಾ ಸಮಿತಿಯ ಅಧ್ಯಕ್ಷರೂ, ಜಿಲ್ಲಾ ಯುವರಾಜಾ ಸ್ಮಾರಕ ನಿಧಿಯ ಅಧ್ಯಕ್ಷರೂ ಆಗಿದ್ದ ಮೀರ್ ಸಫ್ದರ್ ಹುಸೇನ್ ರವರು, ಆ ನಿಧಿಯಲ್ಲಿದ್ದ ರೂ 27,000/- ಹಣದಲ್ಲಿ, ರೂ 20,000/-ವನ್ನು ರಾಜ್ಯ ಕಛೇರಿಗೂ ಉಳಿದ 7,000/- ವನ್ನು ಜಿಲ್ಲಾ ಸಮಿತಿಯ ಕಟ್ಟಡ ನಿಧಿಗೂ ವರ್ಗಾಯಿಸಿದರು.

ಸೇವಾ ತತ್ಪರತ್ರಯರಾದ ಶ್ರೀ ಬಿ. ಸಿ. ನಂಜುಂಡಯ್ಯ, ಶ್ರೀ ಕೆ. ಶ್ರೀಕಂಠಯ್ಯ ಮತ್ತು ಶ್ರೀ ಎಂ. ಹೆಚ್. ರಾಮಚಂದ್ರರಾಯರು ಇವರುಗಳ ಅವಿಶ್ರಾಂತ ದುಡಿಮೆಯ ಫಲವಾಗಿ ಶ್ರೀ ಕಂಠೀರವ ಸ್ಕೌಟ್ ಭವನವು ಎದ್ದು ನಿಂತಿತು. ಕಟ್ಟಡದ ಶಂಖು ಸ್ಥಾಪನೆಯನ್ನು 1 - 8 - 49 ರಂದು ಅಂದಿನ ದಿವಾನರಾಗಿದ್ದ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ರವರು ನೆರವೇರಿಸಿದ್ದರು ಅಂದಿನ ಮುಖ್ಯ ಮಂತ್ರಿಗಳಾಗಿದ್ದ ಶ್ರೀ ಕೆ. ಸಿ. ರೆಡ್ಡಿಯವರು 12 - 2 - 51 ರಂದು ಉದ್ಘಾಟಿಸಿದರು. ಮುಖ ಮಂಟಪ, ಎತ್ತಿ ಕಾಣುವ ಸ್ತಂಭಗಳು ಮಧ್ಯದಲ್ಲಿ ಎತ್ತರಿಸಿದ ಮೇಲ್ ಛಾವಣಿಯುಳ್ಳ ಸಭಾ ಭವನ, ಮುಖ್ಯ ರಸ್ತೆಗೆ ಎತ್ತಿ ಕಾಣುವ ಕಟ್ಟಡ ವಿನ್ಯಾಸ ಇವುಗಳು ಕಟ್ಟಡ ವಿಶಿಷ್ಟತೆಯನ್ನು ಸಾರುವಂತಿದೆ. ಮುಖ್ಯ ಕಟ್ಟಡಕ್ಕೆ ಹೊಂದಿಕೊಂಡಿರುವ ಸಭಾಭವನ, ಒಳ ಅಂಗಳ ಮತ್ತು ಪಾಕಶಾಲೆ ಇವುಗಳನ್ನು ದಿನ ಕಳೆದಂತೆ ಸೇರಿಸಲಾಯಿತು.

ಕಂಠೀರವ ಸ್ಕೌಟ್ ಭವನದ ಎದುರುಗಡೆ ವಿಶಾಲವಾದ ''ಪೆರೇಡ್ ಗ್ರೌಂಡ್ಸ್'' ಇದೆ. ಸಾಹಸಿಕ ಹೊರಾಂಗಣ ಚಟುವಟಿಕೆಗಳಿಗೆ, ಶಿಬಿರವಾಸ, ಪ್ರಕೃತಿ ಅಧ್ಯಯನ ಮತ್ತು ತರಬೇತಿಗಳಿಗೆ ಸಹಾಯವಾಗುವಂತೆ, ದೇವರಾಯನ ದುರ್ಗ, ನಾಮದ ಚಿಲುಮೆ ಬಳಿ ನಮ್ಮದೇ ಆಗಲಿದ್ದ '' ಶಿಬಿರ ಕೇಂದ್ರ'' ವಿದ್ದಿತು.

### ಸ್ವತಂತ್ರ ದಳಗಳು

'' ಸ್ಕೌಟ್ ಅಂತರ್ಭಾವನೆ'' ಮತ್ತು 'ದಕ್ಷತೆ' ಇವುಗಳಿಗೆ, ವಿಶ್ವದ ಎಲ್ಲೆಡೆ ಸ್ವತಂತ್ರ ದಳಗಳು ಹೆಸರಾಗಿವೆ. 1933 ರಷ್ಟು ಹಿಂದೆಯೇ, ತಮ್ಮ ಶಿಷ್ಯ ಶ್ರೇಷ್ಠರೂ, ಜಿಲ್ಲಾ ಸಂಸ್ಥೆಯ ಸಹ ಕಾರ್ಯದರ್ಶಿಗಳೂ ( 1924 ರಿಂದ 44ರವರೆಗೆ) ಆಗಿದ್ದ ಶ್ರೀ ಎ. ವಿ. ಸುಬ್ರಮಣ್ಯಂ ಅವರ ನೆರವು, ನೇತೃತ್ವದಲ್ಲಿ ಶ್ರೀ ಹನುಮಾನ್ ಸ್ಕೌಟ್ಸ್ ದಳವನ್ನು ಸ್ಥಾಪಿಸಿ 1944ರಲ್ಲಿ ಆ ಗ್ರೂಪ್‌ನ ಕಡಿವಾಣವನ್ನು ತಾವೇ ವಹಿಸಿಕೊಂಡರು. ಈ ನಿರ್ವಹಣೆಯು ಕಾಕತಾಳೀಯವಾದದ್ದಷ್ಟೇ ಅಲ್ಲದೆ, ರಾಜ್ಯದಲ್ಲೇ ಹೆಸರು ಪಡೆದಿದ್ದ ಈ ದಳವು ತನ್ನ ಕೌಶಲ್ಯ ಮತ್ತು ಪ್ರೌಢಿಮೆಗಳಿಗೆ ಅಂತರರಾಜ್ಯ ಖ್ಯಾತಿ ಗಳಿಸಿ ತನ್ನ ಹಿರಿಮೆಯನ್ನು ದೃಢೀಕರಿಸಿಕೊಂಡಿತು. ಈ ದಳದ ಸ್ಕೌಟರುಗಳಲ್ಲಿ ಶ್ರೀ ಸುಬ್ರಮಣ್ಯಂರವರನ್ನು ಬಿಟ್ಟರೆ, ಹೆಸರಿಸಬಹುದಾದವರಲ್ಲಿ ಶ್ರೀ ಗುರುರಾಜಾ ರಾವ್ ( ಗುಬ್ಬಿಯಲ್ಲಿ ನೆಲೆಸಿದವರು), ಶ್ರೀ ಹೆಚ್. ಎಸ್. ವೆಂಕಟರಾಮಯ್ಯ, ( ಅಡ್ವೋಕೆಟ್ ಆಗಿದ್ದರು) ಶ್ರೀ ಪದಕಿ ಆರ್. ಜಿ ( ವೈ.ಹೆಚ್. ಎ. ಐ.ನ ರಾಷ್ಟ್ರ ಕಾರ್ಯದರ್ಶಿ ಆಗಿದ್ದರು ) , ಶ್ರೀ ಸಿ, ಎಸ್. ಸಾಂಭಶಿವನ್ (ಮುಂದೆ ಪತ್ರಿಕೋದ್ಯಮಿ ಆಗಿದ್ದರು) ಮತ್ತು ಶ್ರೀ ಆರ್. ಚಂದ್ರಶೇಖರ್ (ಸಹಾಯಕ ತೋಟಗಾರಿಕೆ ನಿರ್ದೇಶಕರಗಿ, ರಾಷ್ಟ್ರ ಮಟ್ಟದಲ್ಲಿ ಪಚಮಡಿಯ ತರಬೇತಿ ಕೇಂದ್ರದಲ್ಲಿ ನಿರ್ವಾಹಕರಾಗಿ, ಪಶ್ಚಿಮ ಪ್ರಾದೇಶಿಕ ಕಛೇರಿ, ಅಹಮದಾಬಾದ್‌ನಲ್ಲಿ ಸಂಘಟನಾಧಿಕಾರಿಯಾಗಿ, ಪೂರ್ವ ಪ್ರಾದೇಶಿಕ ಕಛೇರಿ ಪಾಟ್ನಾದಲ್ಲಿ ಆಡಳಿತಾಧಿಕಾರಿಯಾಗಿ, ರಾಷ್ಟ್ರ ಕಛೇರಿಯ ದೆಹಲಿಯಲ್ಲಿ, ಪ್ರಕಟನಾ ವಿಭಾಗದಲ್ಲಿ ಸಹಾಯಕರಾಗಿ, ಈಗ ರಾಜ್ಯ ಕಛೇರಿಯ ಮಾಸಪತ್ರಿಕೆಯ ಸಹ ಸಂಪಾದಕರು, ಲೀಡರ್ ಟ್ರೈನರೂ ಆಗಿರುತ್ತಾರೆ. ಈ ದಳವು 1958ರಲ್ಲಿ ತನ್ನ ಬೆಳ್ಳಿ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸಿತು.

1939-40ರಲ್ಲಿ ಶ್ರೀ ಎಸ್. ಎಸ್. ಸೀತಾರಾಮಯ್ಯ ನವರಿಂದ ಪ್ರಾರಂಭಿಸಲ್ಪಟ್ಟ ಶ್ರೀ ಏಕಲವ್ಯ ದಳವು 15 ವರ್ಷಗಳ ಕಾಲ ವೈಭವದಿಂದ ಮೆರೆಯಿತು; ಶ್ರೀ ಹನುಮಾನ್ ದಳದಂತೆ ಸ್ಪರ್ಧಾತ್ಮಕವಾಗಿ ಕೆಲಸಮಾಡಿತು ಬಳಿಕ ಶ್ರೀಯುತರುಗಳಾದ ಕೆ. ಬಿ. ನಂಜಪ್ಪ, ಎಂ. ಹೆಚ್. ಆರ್. ಕಾಶಿ ವಿಶ್ವನಾಥ ಶೆಟ್ಟಿ, ಎಂ ಗಂಗಪ್ಪ ಮತ್ತು ಕೆ. ಎಸ್ ಶಂಕರ್ ಮುಖ್ಯರು ರಾಜ್ಯ ತರಬೇತಿ ಆಯುಕ್ತರುಗಳಾಗಿ ಸೇವೆ ಸಲ್ಲಿಸಿದ ಶ್ರೀ ಟಿ.ಸಿ. ಆದಿರಾಜಯ್ಯ ಮತ್ತು ಶ್ರೀ ಕೆ . ಎಸ್. ಶಂಕರ್ ರವರು ಉಲ್ಲೇಖನೀಯರು. ಈ ಎರಡು ದಳಗಳ ಅನೇಕ ಸ್ಕೌಟ್‌ಗಳು ವಿದೇಶಗಳಲ್ಲಿ ನೆಲೆಸಿ ( ಶ್ರೀ ಬಿ. ಯರ್ ಶಿವಕುಮಾರ್, ಶ್ರೀ ಸುಜಿತಕುಮಾರ್, ಶ್ರೀ ಪದ್ಮರಾಜು ಇತ್ಯಾದಿ) ಹೆಸರುಗಳಿಸಿ ದಳಗಳ, ತುಮಕೂರಿನ, ರಾಜ್ಯದ ಕೀರ್ತಿ ಪತಾಕೆಯನ್ನು ಎತ್ತಿ ಹಿಡಿದಿರುತ್ತಾರೆ.

### ಕೃತಜ್ಞತೆಗಳು

ತುಮಕೂರು ಜಿಲ್ಲಾ ಸಂಸ್ಥೆಯ ಮಹಾನ್ ಕಾರ್ಯದಲ್ಲಿ ಭುಜಕೊಟ್ಟು ಸಹಕರಿಸಿ, ನೆರವು ನೀಡಿ, ಪ್ರೋತ್ಸಾಹಿಸಿ, ಬೆಳೆಸಿಕೊಂಡು ಬಂದಿರುವ ಸಾವಿರಾರು ಮಹನೀಯ ಮಹಿಳೆಯರನ್ನು ಈ ಲೇಖನದಲ್ಲಿ ಉಲ್ಲೇಖಿಸಲು ಸಾಧ್ಯವಾಗ ಲಾರದಾದರೂ, ಈಗಾಗಲೇ

ಕಾರ್ಯ ಸಾಧಿಸಿದ, ಜಿಲ್ಲಾ ಕ॥ ಸ್ಕೌಟ್ ಶ್ರೀ ಬಿ.ಸಿ. ನಂಜುಂಡಯ್ಯ, ಮಿತಭಾಷಿಗಳಾದ ಶ್ರೀ ಕೆ. ಶ್ರೀಕಂಠಯ್ಯನವರನ್ನೂ, ಕಾಯಕದ ಆದರ್ಶದಿಂದ ಹುರಿದುಂಬಿಸಿದ ಶ್ರೀ ಎಂ. ಹೆಚ್. ಆರ್. ಅವರನ್ನೂ ವಿಶೇಷವಾಗಿ ಉಲ್ಲೇಖಿಸಲೇಬೇಕು. ಶ್ರೀ ಎಂ. ಎಸ್. ಸೀತಾರಾಮಯ್ಯ, ತಮ್ಮಯ್ಯ, ವಿಶ್ವನಾಥ ಶೆಟ್ಟಿ, ವಾಸು, ನಿರಂಜನ್‌ಪಾಲ್, ಟಿ.ಸಿ. ಸದಾಶಿವಯ್ಯ, ಟಿ. ರಾಮಚಂದ್ರ, ಬಿ.ಯರ್ಘ. ಶಿವಕುಮಾರ್, ರಾಮಯ್ಯ ಮುಂತಾದವರನ್ನು ನೆನಸಲೇಬೇಕು.

11) **ರಾಜ್ಯ ತರಬೇತಿ ತಂಡ:** (1) ಶ್ರೀ ಎಸ್. ಬೈರಪ್ಪ, ಸ॥ ಜಿಲ್ಲಾ ಕಮಿಷನರು ಮುಂದೆ ರಾಜ್ಯ ತರಬೇತಿ ಆಯುಕ್ತರು, (ಹೆ॥ ಕ್ವಾ॥ ಕ. ತರಬೇತಿ)

ಶ್ರೀ ಯುತರುಗಳಾದ

(2) ಕೆ. ಬಿ. ನಂಜಪ್ಪ, ತಾ॥ಸಹಾಯಕರು, ಮುಂದೆ ರಾಜ್ಯ ತರಬೇತಿ ಆಯುಕ್ತರು,

(3) ಕೆ. ಎಸ್. ಶಂಕರ್, ಜಿಲ್ಲಾ ಕಾರ್ಯದರ್ಶಿಗಳು ಮುಂದೆ ರಾಜ್ಯ ತರಬೇತಿ ಆಯುಕ್ತರು.

(4) ಎಂ. ಹೆಚ್. ರಾಮಚಂದ್ರ ರಾವ್, ತಾಂತ್ರಿಕ ಸಹಾಯಕರು (ಎ. ಎಸ್. ಓ. ಸಿ.(ಸ್ಕೌಟ್ಸ್) ಮತ್ತು ಎಯಲ್ ಟಿ (ಕಬ್ಸ್)

(5) ರಾ. ಚಂದ್ರಶೇಖರ್ಯ, ಸ॥ ಜಿ॥ಕಮಿಷನರ್, ಎಲ್.ಟಿ. (ಕಬ್ಸ್) (ಇವರು ಮುಂದೆ ಪಚಮಡಿಯ ರಾಷ್ಟ್ರೀಯ ಶಿಕ್ಷಣ ಕೇಂದ್ರದಲ್ಲಿಯೂ, ಪಶ್ಚಿಮ ಮತ್ತು ಪೂರ್ವ (ಅಹಮದಾಬಾದ್ ಮತ್ತು ಪಾಟ್ನ) ಪ್ರಾದೇಶಿಕ ಕಛೇರಿಗಳಲ್ಲಿಯೂ, ರಾಷ್ಟ್ರೀಯ ಕಛೇರಿಯಲ್ಲಿಯೂ ಕೆಲಸ ಮಾಡಿರುತ್ತಾರೆ.)

**ಸ್ಕೌಟ್ ಪತ್ರಿಕೆ, ಗ್ರಂಥಗಳು :** ಶ್ರೀ ಸಿ. ಸುಬ್ಬರಾವ್‌ರವರ 'ಸ್ಕೌಟಿಂಗ್ ಇನ್ ಇಂಡಿಯ' ಶ್ರೀ ಎಂ.ಹೆಚ್. ಆರ್. 46-48ರಲ್ಲಿ ನಡೆಸಿದ ಸ್ಕೌಟ್ ಸಮಾಚಾರ ಮಾಸ ಪತ್ರಿಕೆ, ಅವರು ಬರೆದು ಪ್ರಕಟಿಸಿದ ಸ್ಕೌಟ್ ಆಟಗಳು ಮರಿಗಳು, ಕೋಮಲಪಾದ ಪುಸ್ತಕಗಳು ಎರಡನೇ ದರ್ಜೆ ಮೊದಲ ದರ್ಜೆ ಪರೀಕ್ಷೆ ಪುಸ್ತಕಗಳು; ಶ್ರೀ ಎಸ್. ಬೈರಪ್ಪನವರು ರಾಜ್ಯ ಕಛೇರಿಗೆ ನೀಡಿದ ಹತ್ತಾರು ಅನುವಾದಗಳು, ಶ್ರೀ ಹೊಯ್ಸಳ ಅವರ 'ಕಂಕಣ', ಈಗ ರಾಜ್ಯ ಕಛೇರಿ ಮಾಸ ಪತ್ರಿಕೆ ಸಹ ಸಂಪಾದಕರಾಗಿರುವ ಶ್ರೀ ಚಂದ್ರಶೇಖರ ರವರ ಅನುವಾದ ಗಳು ಕೊಡುಗೆಗಳು ಪ್ರಕಟಣೆಗಳ ದಿಶೆಯಲ್ಲಿ ಇವಿಷ್ಟೂ ಅಮುಲ್ಯವಾದ, ಶ್ಲಾಘನೀಯ ಕೆಲಸವಾಗಿದೆ. ❑

## ನಮ್ಮ ಜಿಲ್ಲೆ

### ಸಿರಾ

ತುಮಕೂರಿನಿಂದ 50 ಕಿ.ಮೀ. ದೂರದಲ್ಲಿರುವ ಸಿರಾ ರಂಗಪ್ಪನಾಯಕನೆಂಬುವ ನಿಂದ ನಿರ್ಮಿಸಲ್ಪಟ್ಟಿದ್ದು, ಬಿಜಾಪುರ ಸೈನ್ಯದ ದಳಪತಿಯಾಗಿದ್ದ ರಣದುಲ್ಲಾಖಾನ್ ಸಿರಾವನ್ನು ವಶಪಡಿಸಿಕೊಂಡ ಯುದ್ಧಾನಂತರ ಮಲಿಕ್ ಹುಸೇನ್ ಎಂಬಾತನನ್ನು ಸಿರಾದ ರಾಜ್ಯಪಾಲನನ್ನಾಗಿ ನೇಮಿಸಲಾಯಿತು. ಬಿಜಾಪುರ ಸಾಮ್ರಾಜ್ಯದ ಔರಂಗಜೇಬನಿಗೆ ಮಣಿದ ನಂತರ ದಿಲಾವರ್ ಖಾನ್ ಎಂಬಾತನನ್ನು ಸಿರಾದ ರಾಜ್ಯಪಾಲನನ್ನಾಗಿ ಮಾಡಲಾಯಿತು. ಅವನು ಇಲ್ಲಿ ನಿರ್ಮಿಸಿದ ಅರಮನೆ ಹಾಗೂ ಸುಂದರ ಉದ್ಯಾನಗಳು ಮುಂದೆ ಬೆಂಗಳೂರು ಮತ್ತು ಶ್ರೀರಂಗಪಟ್ಟಣದಲ್ಲಿನ ಅರಮನೆ ಹಾಗೂ ಬೆಂಗಳೂರಿನ ಕೆಂಪುತೋಟಕ್ಕೆ ಸ್ಫೂರ್ತಿಯಾಯಿತೆಂದು ಹೇಳಲಾಗುತ್ತದೆ.

ಸಿರಾದಲ್ಲಿ ಜುಮ್ಮಾ ಮಸೀದಿ ಹಾಗೂ ಮಲ್ಲಿಕ್ ರಿಹಾನ್‌ನ ಸಮಾಧಿಯಿವೆ. ಕಡಿದ ಕಲ್ಲಿನಿಂದಲೇ ನಿರ್ಮಾಣವಾಗಿರುವ ಇವೆರಡೂ ಮುಸ್ಲಿಂ ಶೈಲಿಯ ವಾಸ್ತು ಶಿಲ್ಪಕ್ಕೆ ಉತ್ತಮ ಉದಾಹರಣೆಗಳಾಗಿವೆ. ಬುರುಜನ್ನು ಹೊರತು ಪಡಿಸಿ ಸಂಪೂರ್ಣ ಹಿಂದೂ ಶೈಲಿಯಲ್ಲಿ ನಿರ್ಮಿತವಾಗಿರುವ ಇಬ್ರಾಹಿಂ ರೋಜ ಮತ್ತೊಂದು ಪ್ರೇಕ್ಷಣೀಯ ಸ್ಥಳ. ಈ ಕಟ್ಟಡದ ಪ್ರವೇಶದ್ವಾರ ಹಾಗೂ ಪಡಸಾಲೆಗಳಲ್ಲಿ ಹಿಂದೂ ಶೈಲಿಯ ಅಲಂಕಾರಗಳಿವೆ.



# ಪರಮ ತೋರಣ

ತು.ರಾ.ಸು
(ಆರ್. ಸುಂದರರಾಜ್)
ಜಿಲ್ಲಾ ತರಬೇತಿ ಸಂಸ್ಥೆ, ತುಮಕೂರು.

ಉಸಿರ ಧರೆಗೆ ಹಸಿರ ಬೆಸುಗೆ
ಸಾಸಿರ ನಸುನಗೆ ಕೊಡುಗೆ
ನಲಿಯೆ ವನಸಿರಿ ನಲದ ಸೋದರಿಕೆ ಸದನ.
ಅಡಿಗಡಿಗೆ ನಿಷ್ಠೆ ನಿಗರ್ವ
ಶಿಸ್ತು ಸಹನೆ ಶಾಂತಿ ಪ್ರೀತಿ
ನಾಡ ಗುಡಿಗೆ ನುಡಿಪಡಿಗೆ ನಿತ್ಯಚೇತನ

ಪರಹಿತ ಪಣ ಪೂಜಾರತಿ
ಹಿರಿಮೆ-ಗರಿಮೆ ಸ್ನೇಹ ಸರತಿ
ನಿರಂತರದೊರತೆ ಪಕ್ವ ಜೀವ ಸಂಹಿತೆ.
ಪರಿಭವಕೆ ಕೊರಗದ ಕರಣ
ಭರವಸೆಯ ಭಂಡಾರ ಜನ
ಹೊರಗೊಳಗೆ ಪರಸ್ತ್ರೀ ಭಗಿನಿಮಯ ಚರಿತೆ

ನೀತಿ ಪಾಲಿಕೆ ಅಭಿಜ್ಞಾನ
ಜಾತಿ ಮತ ಪಂತ ಕಂಪನ
ನವನೂತನ ಅನಿಕೇತನ ಅಭಿವರ್ಧನ
ಮಿತ ವೆಚ್ಚದ ಬಲು ಕೆಚ್ಚಿನ
ಸ್ಮಿತ ವದನ ಸಹಜ ಜತನ
ತನು ದೀಪ ಮನ ದೀಪ ಜಯನಂದನವನ

ಭಿಡೆಯಿಲ್ಲದ ಗಡಿಯಿಲ್ಲದ
ಹಗಲಿರುಳಿಗೆ ಅವಿರತ ತಡೆ
ಕಲುಷಿತ ಭಾವಾತ್ಮಧಾರಣ ಸ್ವಾರ್ಥ ಕಣ!
ಆ ಗಡಿ ಈ ಗಡಿ ಗಡಿಬಿಡಿ
ಯುಗದಾಚೆಗಟ್ಟಿದ ಕರ್ಮ
ಜೀವಾತ್ಮ ಪಣ ಕಂಕಣ ಪರಮತೋರಣ.

# One Stop Shop For Hi-Tech Electronics







It's Bharat Electronics - India's premier electronics company, with a reputation for quality and leading edge technology that goes back four decades.

Bharat Electronics is geared to meet your demands. In **Defence, Radars, Defence Communications, Sound and Vision Broadcasting, Opto-electronic Equipment** and in a variety of sophisticated **Semiconductor Electronics.** Even to help you source PCB assemblies manufactured in our state-of-the-art SMT assembly line. Or finding Total Systems Solutions as per your individual requirements.

Bharat Electronics, certified by the ISO 9000 series is a short cut to your hi-tech electronic needs.

भारत इलेक्ट्रॉनिक्स
BHARAT ELECTRONICS

QUALITY, TECHNOLOGY AND INNOVATION

**Bharat Electronics Limited**
(A Govt. Of India Enterprise)
116/2, Race Course Road, Bangalore 560 001.
Ph:2267322 Fax:080-2258410



# ಒಂದು ಎಲೆಯ ಹಿಂದಿನ ನೆಲೆ

ಸಂಗ್ರಹ: **ಎಂ.ವಿ. ಸಿದ್ದಲಿಂಗಶೆಟ್ಟಿ**
ತುಮಕೂರು.

ಸ್ಕೌಟ್ಸ್ ಸಂಸ್ಥೆಯ ಸ್ಥಾಪಕರಾದ ಲಾರ್ಡ್ ಬೋಡೆನ್ ಪಾವೆಲ್ ರವರ '**ಸ್ಟೋರಿ ಆಫ್ ಹಿಸ್ ಲೈಫ್**' ಎಂಬ ಪುಸ್ತಕದಿಂದ ಆಯ್ದ ಈ ಭಾಗವು ಕನ್ನಡಕ್ಕೆ ಭಾವಾರ್ಥ ಮಾಡಿದೆ. ಅವರು ಸೈನ್ಯದಲ್ಲಿ ಉನ್ನತ ಅಧಿಕಾರಿಗಳಾಗಿದ್ದು, ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದರು. ಯುದ್ಧದ ಅನುಭವಗಳನ್ನು ತಮ್ಮ ಪುಸ್ತಕಗಳಲ್ಲಿ ಬಾಲ ಚಮೂಗಳೊಂದಿಗೆ ಹಂಚಿಕೊಂಡಿದ್ದಾರೆ. 1896 ರಲ್ಲಿ ನಡೆಸಿದ ಕಾರ್ಯಾಚರಣೆಯಲ್ಲಿ ಅವರ ತೀಕ್ಷ್ಣಮತಿ, ಸಾಹಸಪ್ರವೃತ್ತಿ, ಮತ್ತು ಯಶಸ್ವೀ ಮುಂದಾಳತ್ವವನ್ನು ಕಾಣಬಹುದು.

ದಕ್ಷಿಣ ಆಫ್ರಿಕಾ ಖಂಡದಲ್ಲಿ ರೊಡೀಷಿಯಾ, ಒಂದು ರಾಜ್ಯ. ಆ ರಾಜ್ಯದಲ್ಲಿ ಲಿಂಪೋಪೋ ನದಿ ಹರಿಯುತ್ತದೆ. ಅದರ ಉತ್ತರ ದಿಕ್ಕಿಗೆ ಮೆಟಬೆಲೆ ಎಂಬ ಪ್ರದೇಶವಿದೆ. ಅಲ್ಲಿಯ ಉಗ್ರಗಾಮಿಗಳು ಸಿಡಿದೆದ್ದು ಸ್ಥಳೀಯರ ಮೇಲೆ ದಂಗೆ ಏಳುತ್ತಿದ್ದರು. ಅವರ ಉಪಟಳ ಯುದ್ಧಕ್ಕೆ ನಾಂದಿಯಾಯಿತು. 'ಅದನ್ನು ಮೆಟಬೆಲೆ ಯುದ್ಧವೆಂದೇ ಕರೆಯಲಾಯ್ತು.

ವೀರಯೋಧರಾದ ಲಾರ್ಡ್ ಬೋವೆನ್ ಪಾವೆಲ್‌ರವರ ನೇತೃತ್ವದಲ್ಲಿ ಬಾಲ ಚಮೂದಳವೂ ಶತ್ರು ಶಿಬಿರವನ್ನು ಕಂಡು ಹಿಡಿಯಲು ಹೊರಟರು. ಮತಾಪೋ ಬೆಟ್ಟದ ಪ್ರದೇಶದಲ್ಲಿ ಶತ್ರು ಸೈನ್ಯದವರು ತಮ್ಮ ನೆಲೆಯನ್ನು ಬಿಟ್ಟಿರುವರೆಂಬ ವದಂತಿ ಇದ್ದಿತು. ಅದರಂತೆ ಬೆಳಿಗ್ಗೆ 6 ಗಂಟೆ ಹೊತ್ತಿಗೆ ತಂಡವು ಹುಲ್ಲುಗಾವಲು ಮೂಲಕ ಹೊರಟಿತು. ಬೋಡೆನ್ ಪಾವೆಲ್ ರವರು ಹುಲ್ಲುಗಾವಲು ಮಧ್ಯದಲ್ಲಿ ಹೊಸದಾಗಿ ನಿರ್ಮಿತವಾದ ಸೀಳು ದಾರಿಯನ್ನು ಗಮನಿಸಿದರು. ಸೀಳುದಾರಿಯು ಹಲವಾರು ಜನರ ಕಾಲ್ತುಳಿತದಿಂದ ನಿರ್ಮಿತವಾಗಿದ್ದು ಹುಲ್ಲುಗಳೆಲ್ಲಾ ಮುಂದೆ ಮುಂದಕ್ಕೆ ತುಳಿತದಿಂದ ಬಾಗಿರುವುದನ್ನು ಮುಂಜಾನೆಯ ಮಂಜು ಮಾಸಿರುವುದರಿಂದ ಆಗ ತಾನೇ ಆ ದಾರಿಯಲ್ಲಿ ಅನೇಕರು ಪ್ರಯಾಣ ಮಾಡಿರಬಹುದೆಂಬ ತೀರ್ಮಾನಕ್ಕೆ ಬಂದರು. ಅದೇ ಸೀಳು ದಾರಿಯನ್ನನುಸರಿಸಿ ಬಾಲ ಚಮೂದಳದವರು ಮುಂದೆ ಸಾಗಿದರು. ಸೀಳುದಾರಿಯು ಮುಗಿದು ಮಣ್ಣು ದಾರಿಯು ಪ್ರಾರಂಭವಾಯಿತು. ತೀಕ್ಷ್ಣಮತಿಗಳಾದ ಬೋಡೆನ್ ಪಾವೆಲ್ ರವರು ಅನೇಕ ಹೆಜ್ಜೆ ಗುರುತುಗಳು ಮಣ್ಣಿನ ಮೇಲೆ ಒಂದೇ ಅಂತರದಲ್ಲಿ ಬಿದ್ದಿರುವುದು ಗೋಚರವಾಯಿತು. ಹೆಜ್ಜೆಯ ಗುರುತುಗಳೆಲ್ಲವೂ ಪುಟ್ಟಪುಟ್ಟದಾಗಿ ಸ್ವಲ್ಪ ಹೆಚ್ಚಿನ ಆಳಕ್ಕೆ ಇದ್ದವು. ಅಂದರೆ ಯಾರೋ ತಲೆಯ ಮೇಲೆ ಭಾರವಾದ ವಸ್ತುಗಳನ್ನು ಹೊತ್ತುಕೊಂಡು ಹೋಗಿರಬಹುದೆಂಬ ಸಂಶಯಕ್ಕೆ ಬಂದರು. ಬರಿಗಾಲಿನ ಹೆಚ್ಚು ಅಂತರದ ನಡಿಗೆಯ ಪುಟ್ಟ ಹೆಜ್ಜೆಯ ಗುರುತುಗಳೂ ಮಕ್ಕಳವೆಂದು ಹೇಳಬಹುದಾಗಿತ್ತು.

ಆ ನಿರ್ಜನ ರಸ್ತೆಯ ಬದಿಯಲ್ಲಿ ಒಂದು ಎಲೆ ಬಿದ್ದಿರುವುದನ್ನು ಬೋಡೆನ್ ಪಾವೆಲ್‌ರವರು ಗಮನಿಸಿ ಎಲೆಯ ವಾಸನೆಯು 'ದೇಶೀ ಮದ್ಯದ' ವಾಸನೆಯಾಗಿದ್ದಿತು. ಆ ಎಲೆಯ ಗಿಡವು ಆ ಪ್ರದೇಶದಲ್ಲೆಲ್ಲೂ ಬೆಳೆದಿರಲಿಲ್ಲ. ಸುಮಾರು 4-5 ಮೈಲು ದೂರದ ಹಳ್ಳಿಯಲ್ಲಿ ಬೆಳೆದಿರುವುದನ್ನು ಗಮನಿಸಿದ್ದರು. ಎಲೆಯು ರಸ್ತೆಯಿಂದ 4-5 ಗಜ ದೂರದಲ್ಲಿರುವುದರಿಂದ ಬೆಳಗಿನ ತಂಗಾಳಿಗೆ ತೂರಿಕೊಂಡು ದೂರಬಿದ್ದಿರಬೇಕೆಂದು ಭಾವಿಸಿದರು.

**ಸ್ಕೌಟ್ಸ್ ಸಂಸ್ಥೆಯ ಸ್ಥಾಪಕರಾದ ಲಾರ್ಡ್ ಬೋಡೆನ್ ಪಾವೆಲ್ ರವರ 'ಸ್ಟೋರಿ ಆಫ್ ಹಿಸ್ ಲೈಫ್' ಎಂಬ ಪುಸ್ತಕದಿಂದ ಆಯ್ದ ಈ ಭಾಗವು ಕನ್ನಡಕ್ಕೆ ಭಾವಾರ್ಥ ಮಾಡಿದೆ. ಅವರು ಸೈನ್ಯದಲ್ಲಿ ಉನ್ನತ ಅಧಿಕಾರಿಗಳಾಗಿದ್ದು, ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದರು. ಯುದ್ಧದ ಅನುಭವಗಳನ್ನು ತಮ್ಮ ಪುಸ್ತಕಗಳಲ್ಲಿ ಬಾಲ ಚಮೂಗಳೊಂದಿಗೆ ಹಂಚಿಕೊಂಡಿದ್ದಾರೆ.**

ಲಾರ್ಡ್ ಬೋಡೆನ್ ಪಾವೆಲ್‌ರವರು ಅಂತಿಮ ತೀರ್ಮಾನವನ್ನು ಕೈಗೊಂಡು ಪಕ್ಕದ ಹಳ್ಳಿಯ ಹೆಂಗಸರು ತಮ್ಮ ತಲೆಯ ಮೇಲೆ ದೇಶೀ ಮದ್ಯದ ಗಡಿಗೆಗಳನ್ನು ಹೊತ್ತುಕೊಂಡು ಗಡಿಗೆ ಬಾಯಿಗಳಿಗೆ ತುಳುಕದಂತೆ ಎಲೆಗಳನ್ನು ಮುಚ್ಚಿರುವುದಾಗಿಯೂ ತಾಯಂದಿರ ಜೊತೆಯಲ್ಲಿ ಪುಟ್ಟ ಪುಟ್ಟ ಪುಟ್ಟ ಹೆಜ್ಜೆಯ ಮಕ್ಕಳುಗಳು ಹಿಂಬಾಲಿಸುವುದಾಗಿಯೂ, ದೇಶೀ ಮದ್ಯವು ಬೆಳಗಿನ ಪಾನಕ್ಕೆ ರುಚಿಕರವಾಗಿದ್ದು ಸೂರ್ಯೋದಯಕ್ಕೆ ಮುಂಚೆಯೇ ಹಿತಕರವಾದ ವಾತಾವರಣದಲ್ಲಿ ತಂಗಾಳಿಯು ಬೀಸುವ ಸಮಯದಲ್ಲಿ ಆ ಪ್ರದೇಶವನ್ನು ನಿಶ್ಕ್ರಮಿಸಿರುವರು. ಸೂರ್ಯನ ಬೆಳಕು ಬಿದ್ದನಂತರ ದೇಶೀ ಮದ್ಯವು ಹುಳಿ ಹೆಂಡವಾಗುತ್ತದೆ. ಶತ್ರುಗಳು ಬೆಟ್ಟ ಪ್ರದೇಶದಲ್ಲಿ ಬೀಡು ಬಿಟ್ಟಿರುವ ಸಂಭವವಿದೆ.

ಬಾಲ ಚಮೂದಳದವರು ತಮ್ಮ ಪ್ರಯಾಣವನ್ನು ಬೋಡೆನ್ ಪಾವೆಲ್ ರವರ ಆದೇಶದಂತೆ ಮುಂದುವರೆಸಿದಾಗ ಮೆಟಾಪೋ ಬೆಟ್ಟದ ಗುಪ್ತನೆಲೆಗಳು ಇರುವುದನ್ನು ಗಮನಿಸಿದರು. ದೇಶೀ ಮದ್ಯದ ಕುಡಿತದಿಂದ ಸೈನಿಕರು ಮೈ ಮರೆತು ಮಲಗಿರುವುದನ್ನು ಗಮನಿಸಿದರು. ಸಂಸ್ಥೆಯ ಮೂಲಕ ಹೆಚ್ಚುವರಿ ಸೈನ್ಯವನ್ನು ತಕ್ಷಣ ಕರೆಯಿಸಿ ಶತ್ರುಗಳ ವಿರುದ್ಧ ಕಾರ್ಯಾಚರಣೆ ನಡೆಸಿ ಜಯಶೀಲರಾದರು. ಒಂದು ಎಲೆಯ ಹಿಂದಿನ ನೆಲೆ ಮತ್ತು ಅದರ ಸೆಲೆ ಸ್ಕೌಟ್‌ಗಳಿಗೆ ಅನುಭವವಾಯಿತು. ❑

" Prosperity Makes friends
Adversities Tries them "



# ನಮ್ಮ ಮನೆ ಭೂಮಿ

ರವಿ ವೆಸ್ಲಿ ಎಂ.ಎ
(ಮಹಿಳಾ ಅಧ್ಯಯನ) ಬಿ.ಎಡ್.
ರಾಷ್ಟ್ರೀಯ ಮುಖ್ಯ ಕಛೇರಿ, ಬೆಂಗಳೂರು.

ಆಶ್ಚರ್ಯ! ಇದು ಹೇಗೆ? ಯೋಚಿಸು. ಹೌದಲ್ಲವೇ? ಎನ್ನಿಸುತ್ತದೆ. ನಾವು ಮಾನವರು ಮನೆ ಕಟ್ಟಿಕೊಂಡು ವಾಸಿಸುತ್ತೇವೆ. ಮನೆಯ ಕಲ್ಪನೆ ನಮ್ಮದಲ್ಲ. ನಮ್ಮ ಪೂರ್ವಜರು ಅಲೆಮಾರಿಗಳಾಗಿದ್ದರು. ಸಂಖ್ಯೆ ಹೆಚ್ಚಾದಂತೆ ಅಲೆಯುವುದು ಕಷ್ಟವಾದಾಗ, ಪ್ರಾಣಿಗಳ ಗುಹೆಗಳಿಂದ ಪ್ರೇರಣೆ ಪಡೆದು ಮನೆ ಮಾಡಿಕೊಳ್ಳಲು ಪ್ರಾರಂಭಿಸಿದರು.

ಹುಲಿ, ಸಿಂಹ ಮುಂತಾದ ಪ್ರಾಣಿಗಳು ಗುಹೆಗಳಲ್ಲಿ ವಾಸ ಮಾಡುತ್ತವೆ. ಕೆಲವು ಪಕ್ಷಿಗಳು ಗೂಡು ಕಟ್ಟಿಕೊಂಡು ವಾಸಿಸುತ್ತವೆ. ಇರುವೆ, ಗೆದ್ದಲಿನಂತಹ ಕೀಟಗಳೂ ಗೂಡು ಕಟ್ಟಿಕೊಂಡು ವಾಸಿಸುತ್ತವೆ. ಆಶ್ಚರ್ಯವೆಂದರೆ ಹಾವು ಇವುಗಳ ಗೂಡನ್ನೇ ಹುತ್ತವಾಗಿ ಮಾಡಿಕೊಂಡು ವಾಸಿಸುತ್ತದೆ. ಇಲಿ, ಮೊಲ ಮುಂತಾದವು ಬಿಲದಲ್ಲಿ ವಾಸಿಸುತ್ತದೆ. ಬಾವಲಿ, ಹದ್ದು, ಕೊಕ್ಕರೆ ಮುಂತಾದವು ಮರದಲ್ಲೇ ವಾಸಿಸುತ್ತದೆ. ಆನೆ, ಜಿಂಕೆ ಮುಂತಾದವು ನಮ್ಮದೇ ಆದ ವಿಸ್ತಾರವಾದ ಕಾಡಿನ ಭಾಗವನ್ನು ಆವಾಸಸ್ಥಾನವಾಗಿ ಮಾಡಿಕೊಂಡಿರುತ್ತವೆ. ಮೀನು, ಮೊಸಳೆ ಇತ್ಯಾದಿಗಳು ಮತ್ತು ಕೆಲವು ಸಸ್ಯಗಳು ನೀರಿನಲ್ಲಿ ವಾಸಿಸುತ್ತವೆ.

ಹಾವು ಮತ್ತು ಪಶು ಪಕ್ಷಿಗಳು ಈ ರೀತಿ ವಾಸಿಸುತ್ತವೆ. ಹಾಗಾದರೆ ಸಸ್ಯ ಮತ್ತು ಮರಗಳು? ನೆಲದ ಮೇಲೆ ವಾಸಿಸುತ್ತವೆ. ನೆಲ ಎಂದರೇನು? ಎಲ್ಲಿದೆ? ಕಲ್ಲು, ಮಣ್ಣು, ಖನಿಜ ಮತ್ತು ನೀರಿನಿಂದ ಕೂಡಿದ ಭೂಮಿಯ ಮೇಲಿನ ಚಿಪ್ಪು, ನೆಲ. ಅಂದ ಮೇಲೆ ನಮ್ಮ ಪ್ರಾಣಿಗಳ ಮತ್ತು ಸಸ್ಯಗಳ ಅಂದರೆ ಜೀವಿಗಳೆಲ್ಲರ ಮನೆ "**ಭೂಮಿ**".

ಈ ನಮ್ಮ ಮನೆ ಭೂಮಿಯಲ್ಲಿ ಎಲ್ಲಾ ಜೀವಿಗಳೂ ಅನೇಕ ರೀತಿಯ ಚಟುವಟಿಕೆಗಳನ್ನು ಮಾಡುತ್ತವೆ. ಇದರಿಂದ ಭೂಮಿ ಕೊಳೆಯಾಗುತ್ತಿದೆ. ಅದರಲ್ಲೂ ಮಾನವನದೆ ಸಿಂಹಪಾಲು. ಕಾರಣ ನಮ್ಮ ಸಂಖ್ಯೆ ಹೆಚ್ಚಾಗುತ್ತಿದೆ. ಸಂಪನ್ಮೂಲಗಳ ಅಭಾವವಾಗುತ್ತಿದೆ. ಜೀವನ ಕಷ್ಟಕರವಾಗುತ್ತಿದೆ. ನಮ್ಮ ಮನೆ ಎಂದರೆ "**ಮಾನವ ಮನೆ**" ಬೇಸರವಾದಂತೆ ಸ್ವಲ್ಪಕಾಲ ಬೇರೇ ಕಡೆ ಹೋಗಿಬರುತ್ತೇವೆ. ಇಲ್ಲವೇ ಬದಲಾಯಿಸುತ್ತೇವೆ. ಹೀಗೆಯೇ ನಮ್ಮೆಲ್ಲರ ಮನೆಯಾದ ಭೂಮಿಯನ್ನು ಬಿಟ್ಟು ಎಲ್ಲಿಗಾದರೂ ಹೋಗೋಣ ಎಂದರೆ ಮುಂದೆ ಬಂದು ನಿಲ್ಲುವ ಪ್ರಶ್ನೆ ಎಲ್ಲಿಗೆ? ಈ ಪ್ರಶ್ನೆಗೆ ಉತ್ತರ ಹುಡುಕುತ್ತಾ ಮಾನವ ಚಂದ್ರ ಲೋಕಕ್ಕೆ ಹೋಗಿ ಬಂದ, ಮಂಗಳ, ಗುರು ಗ್ರಹಗಳಿಗೆ ಯಾನ ಮಾಡಿದ. ಹೋಗಿ ಬಂದವ ಅಲ್ಲೆಲ್ಲೂ ಜೀವಿಸಲು ಅನುಕೂಲತೆ ಇಲ್ಲವೆಂದ. ಏನಾಶ್ಚರ್ಯ ! ಅಲ್ಲೆಲ್ಲೂ ನಮಗೆ ಬೇಕಾದ ಬೆಳಕು, ಗಾಳಿ, ನೀರು, ಮಣ್ಣು, ಖನಿಜ, ಪ್ರಾಣಿಗಳು, ಸಸ್ಯಗಳು ಇಲ್ಲವಂತೆ. ಅಂದ ಮೇಲೆ ನಮಗೆ ಇರುವುದು "**ಏಕ ಮಾತ್ರ ಮನೆ ಭೂಮಿ**".

ನಮ್ಮ ಮನೆ ಭೂಮಿಯಲ್ಲಿ ಜೀವಿಗಳಿಗೆ ಜೀವಿಸಲು ಬೇಕಾದ ಎಲ್ಲಾ ವ್ಯವಸ್ಥೆಗಳೂ ಇವೆ. ಸೂರ್ಯ ಪ್ರಕಾಶ, ಗಾಳಿ, ನೀರು, ಮಣ್ಣು, ಖನಿಜ, ಸಸ್ಯ ಮತ್ತು ಪ್ರಾಣಿ ಸಂಪತ್ತುಗಳಿವೆ. ಸೃಷ್ಟಿಕರ್ತನ ಇಂತಹ ಬೆಲೆಕೊಟ್ಟರೂ ಸಿಗದ, ಬೆಲೆ ಕಟ್ಟಲಾಗದ ಅಮೂಲ್ಯ ಕೊಡುಗೆಯಾಗಿ ವಂದಿಸಬೇಕಾದುದು ಪ್ರತಿಯೊಬ್ಬರ ನಿತ್ಯ ಕರ್ತವ್ಯವಾಗಿದೆ.

ಸಸ್ಯಗಳು ಎಲ್ಲಾ ಜೀವಿಗಳಿಗೂ ಆಹಾರ ತಯಾರಿಸಿಕೊಡುತ್ತದೆ. ಇಷ್ಟೆ ಅಲ್ಲ ಗಾಳಿ ಶುದ್ಧ ಮಾಡಿ ಕೊಡುತ್ತದೆ. ಕೈಗಾರಿಕೆಗೆ ಬೇಕಾದ ಕಚ್ಚಾವಸ್ತು ಕೊಡುತ್ತದೆ. ರೋಗಗಳಿಗೆ ಔಷದಿ ಕೊಡುತ್ತದೆ. ರಕ್ಷಣೆ ನೀಡುತ್ತದೆ. ಮಳೆ ಬರಲು ಸಹಾಯ ಮಾಡುತ್ತದೆ. ಸಸ್ಯಗಳೇ ಇಲ್ಲದಿದ್ದರೆ ಜೀವ ಸಂಕುಲ ಉಳಿಯುತ್ತಿರಲಿಲ್ಲ.

ಪ್ರಾಣಿಗಳು! ಇವುಗಳೂ ನಮಗೆ ಸಸ್ಯ ನೀಡಿದಂತೆ ಎಲ್ಲವನ್ನೂ ನೀಡುತ್ತದೆ. ಇಷ್ಟೆಲ್ಲಾ ಜೀವಿಗಳಿಗೆ ಬದುಕಲು ಬೇಕಾದ ವ್ಯವಸ್ಥೆ ಭೂಮಿ ಬಿಟ್ಟು ಮತ್ತೆಲ್ಲೂ ಕಂಡು ಬಂದಿಲ್ಲ. ಇದ್ದರೆ ..... ಎಲ್ಲಿ? ಎಂಬುದು ಪ್ರಶ್ನೆಯಾಗಿಯೇ ಉಳಿದಿದೆ.

**ನಮ್ಮೆಲ್ಲರ ಮನೆಯಾದ ಭೂಮಿಯನ್ನು ಬಿಟ್ಟು ಎಲ್ಲಿಗಾದರೂ ಹೋಗೋಣ ಎಂದರೆ ಮುಂದೆ ಬಂದು ನಿಲ್ಲುವ ಪ್ರಶ್ನೆ ಎಲ್ಲಿಗೆ? ಈ ಪ್ರಶ್ನೆಗೆ ಉತ್ತರ ಹುಡುಕುತ್ತಾ ಮಾನವ ಚಂದ್ರ ಲೋಕಕ್ಕೆ ಹೋಗಿ ಬಂದ, ಮಂಗಳ, ಗುರು ಗ್ರಹಗಳಿಗೆ ಯಾನ ಮಾಡಿದ. ಹೋಗಿ ಬಂದವ ಅಲ್ಲೆಲ್ಲೂ ಜೀವಿಸಲು ಅನುಕೂಲತೆ ಇಲ್ಲವೆಂದ. ಏನಾಶ್ಚರ್ಯ !**

ಈ ಭೂಮಿಯಲ್ಲಿರುವ ಎಲ್ಲವೂ ನಮಗೆ ಬೇಕು. ನಾವು ನಿರ್ಮಿಸಿರುವ ಎಲ್ಲಾ ವ್ಯವಸ್ಥೆಗಳೂ ಬೇಕು. ಇವೆಲ್ಲವೂ ನಮ್ಮ ಸುತ್ತಲಿನ ಪರಿಸರ. ಇದನ್ನು ಸ್ವಚ್ಛವಾಗಿಡಬೇಕು. ಇದರಲ್ಲಿ ವಾಸಿಸುವ ನಮ್ಮ ಬಂಧುಗಳಾದ ಎಲ್ಲಾ ಜೀವಿಗಳನ್ನೂ ಕಾಪಾಡಬೇಕು. ಪರಿಸರದಲ್ಲಿರುವ ಸಮತೋಲನ ವ್ಯವಸ್ಥೆಯನ್ನು ರಕ್ಷಿಸಬೇಕು. ಇವುಗಳನ್ನು ನಮ್ಮ ಉಳಿವಿಗಾಗಿ ಸಂರಕ್ಷಿಸಬೇಕು.

ಬನ್ನಿ, ನಾವೆಲ್ಲರೂ ಸೇರಿ ನಮ್ಮ ಏಕ ಮಾತ್ರ ಮನೆ ಭೂಮಿಯನ್ನು ಸಂರಕ್ಷಿಸೋಣ.

"ನಾವು ಬದುಕಿ ಎಲ್ಲವನ್ನೂ ಬದುಕಿ ಉಳಿಯಲು ಅವಕಾಶ ಮಾಡಿಕೊಡೋಣ"

ಸಮುದಾಯ ಗೀತೆ

" ಪ್ರಕೃತಿ ಮಾತೆ ನಮ್ಮ ಆಸೆಯನ್ನು ಪೂರೈಸಬಲ್ಲಳೇ ಹೊರತು ದುರಾಸೆಯನ್ನಲ್ಲ"

ಗಾಂಧೀಜಿ

" Think localy, Act globaly "

U.N.O. ▫



# ಜೀವನ ಒಂದು ಕೌಶಲ್ಯ

**ಯು. ಗೋಪಾಲ ಕೃಷ್ಣ ಭಟ್,** ಎಲ್.ಟಿ. (ಎಸ್)
ದಕ್ಷಿಣ ಕನ್ನಡ.

" **ಮಾ**ನವ ಜನ್ಮ ದೊಡ್ಡದು, ಇದ ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ "ಎಂದು ಶತಮಾನಗಳ ಹಿಂದೆ ಕರೆಯಿತ್ತಿದ್ದರು- ಪುರಂದರದಾಸರು. ಮಾನವ ಜನ್ಮ ಪಡೆಯುವುದು, ಅಂದರೆ ಮಾನವನಾಗಿ ಹುಟ್ಟಿರುವುದು ನಮಗಾರಿಗೂ ಐಚ್ಛಿಕವಲ್ಲ. ಆದರೆ ಮಾನವನಾಗಿ ಬಾಳುವುದು, ಮಾನವಂತನಾಗಿ ಬಾಳುವುದು, ಮಾನ್ಯನೆನಿಸಿ ಕೊಳ್ಳುವುದು ಐಚ್ಛಿಕವೇ ಆಗಿದೆ.

ಪ್ರತಿಯೊಬ್ಬ ಮಾನವನ ಐಹಿಕ ಅಥವಾ ನಾಗರಿಕ ಬದುಕಿಗೆ ಹಲವಾರು ತಾಂತ್ರಿಕ ಕೌಶಲ್ಯಗಳು ಅನಿವಾರ್ಯವಾಗಿವೆ. ಅದರೊಂದಿಗೇ ಸಮಾಜ ಜೀವಿಯಾದುದರಿಂದ ಕೆಲವಿಷಯಗಳಲ್ಲಿ ಇತರರೊಂದಿಗೆ ವ್ಯವಹರಿಸುವ ಅಗತ್ಯವೂ ಇದೆ.

ಮುಖ್ಯವಾಗಿ -

- ಕಾರ್ಯ ಕ್ಷೇತ್ರಗಳಲ್ಲಿ ಸಹಕಾರ
- ಪರಿಣಾಮಕಾರಿ ಸಂಪರ್ಕ - ಸಂವಹನ
- ವೈಯಕ್ತಿಕ ಮತ್ತು ಇತರರ ಪ್ರಚೋದನೆಗಳ ಅರಿವು
- ನಿರ್ಧಾರ ಕೈಗೊಳ್ಳುವಿಕೆಯಲ್ಲಿ ಮನೋದಾರ್ಢ್ಯ

ಇವುಗಳ ಹೊರತು ಮಾನವನಾಗಿ ಇಂದು ಬದುಕುವುದು ಅಸಾಧ್ಯ.

ಇಂದಿನ ಜಗತ್ತು ಪರಿವರ್ತನೆಗಳ ಕ್ಷೇತ್ರ. ಇಲ್ಲಿ ಪರಿವರ್ತನೆಗಳೇ ಶಾಶ್ವತ, ನಿರಂತರ. ಇಂಥ ಸ್ಥಿತಿಗೆ ಹೊಂದಿಕೊಂಡು ಉಳಿದು, ಬೆಳೆದು ಬಾಳಲು 'ಜೀವನದ ಕೌಶಲ್ಯ' ಗಳನ್ನು ತಮ್ಮದಾಗಿಸಿ ಕೊಳ್ಳಬೇಕಾಗುವುದು. ಸಮಾಜದ ಮಾರ್ಗದರ್ಶಕ ಮುಂಚೂಣಿ ಪ್ರಜೆಗಳೆನಿಸಿಕೊಳ್ಳುವ ಸ್ಕೌಟ್/ಗೈಡ್ ಬಾಂಧವರಿಗಂತೂ ಇದರ ಸಮಗ್ರ ಅರಿವು ವಿಶೇಷತಃ ಅಗತ್ಯವಾಗಿದೆ.

ಸಮಕಾಲೀನ ಬದುಕಿನ ಪ್ರಚಲಿತ ಸಮಸ್ಯೆಗಳ ಮೂಲಗಳನ್ನು ತಿಳಿದು ಕೊಳ್ಳುವುದು ಅವುಗಳ ಪರಿಹಾರದ ಮೊದಲ ಹೆಜ್ಜೆ. ಇಂತಹ ಪ್ರಮುಖ ಮೂಲಗಳು-

- ವಸ್ತು ಸ್ಥಿತಿಗಳ ಸಾಮಾನ್ಯ ತಿಳುವಳಿಕೆಯಲ್ಲಿ ಹೆಚ್ಚಳ
- ನಿರುದ್ಯೋಗ
- ಅಧಿಕ ಬಿಡುಸಮಯ
- ವಿಜ್ಞಾನ - ತಂತ್ರಜ್ಞಾನದ ಪ್ರಗತಿ
- ಸಾಮಾಜಿಕ ಪರಿಸ್ಥಿತಿಯಲ್ಲಾಗುತ್ತಿರುವ ಬದಲಾವಣೆಗಳು

## ವೈಯಕ್ತಿಕ ಉಳಿವಿಗಾಗಿ ಜೀವನ ಕೌಶಲ್ಯಗಳು

ಸಮಸ್ಯೆಗಳ ಕ್ಷೇತ್ರವಾಗುತ್ತಿರುವ ಪರಿಸರದಲ್ಲಿ ಹೊಂದಿಕೊಂಡು ಬದುಕುಳಿಯಲು ಸಾಮಾನ್ಯ ಜನರೂ ಹಲವು ವಿಚಾರ - ವಿಷಯಗಳಲ್ಲಿ ರಚನಾತ್ಮಕವಾಗಿ ತಮ್ಮನ್ನು ಸಿದ್ಧಪಡಿಸಿಕೊಳ್ಳಬೇಕಾಗಿದೆ. ಮುಖ್ಯವಾಗಿ

- ಕಾಠಿಣ್ಯರಹಿತ ಹೊಂದಾಣಿಕೆಯ ಮನೋವೃತ್ತಿಯನ್ನು ರೂಢಿಸಿಕೊಳ್ಳುವುದು.

- ತಾಂತ್ರಿಕ ಕೌಶಲ್ಯಗಳಲ್ಲಿ ಸ್ಪರ್ಧಾತ್ಮಕ ಸಾಮರ್ಥ್ಯ ಹೊಂದುವುದು.

- ತಮ್ಮ ಸಾಮರ್ಥ್ಯಗಳನ್ನು ಇತರರ ಅರಿವಿಗೆ ತರುವುದರ ಮೂಲಕ ಹಾಗೂ ಸಂಪನ್ಮೂಲಗಳ ಬಳಕೆಯಿಂದ ಮಾಹಿತಿ ಸಂಗ್ರಹಿಸಿ ಕೊಳ್ಳುವುದರ ಮೂಲಕ ಉದ್ಯೋಗ ಅನ್ವೇಷಣೆಯ ಕೌಶಲ್ಯ ಪಡೆಯುವುದು.

- ತಮ್ಮ ಸಮಸ್ಯೆಗಳಿಗೆ ರಚನಾತ್ಮಕ ಪರಿಹಾರ ಪಡೆಯಲು ತಮಗೆ ಸಂಬಂಧಿಸಿದ ನಿರ್ಧಾರಗಳನ್ನು ತಾವೇ ಕೈಗೊಳ್ಳಲು ಬೇಕಾದಧನಾತ್ಮಕ ಚಿಂತನೆಗೆ ಸಮರ್ಥರಾಗುವುದು.

- ತಮ್ಮ ಜೀವನಕ್ಕೆ ಸಂಬಂಧಿಸಿದ ಆಗುಹೋಗುಗಳ, ನಂಬುಗೆಗಳ

- ಹಿನ್ನೆಲೆ ಹಾಗೂ ಮೌಲ್ಯಗಳನ್ನರಿತುಕೊಳ್ಳುವ ಸಾಮರ್ಥ್ಯ ಬೆಳೆಸಿಕೊಳ್ಳುವುದು.

- ತಮ್ಮ ಸುತ್ತಮುತ್ತ ಉದ್ಭವಿಸುವ ಅಥವಾ ಅಸ್ತಿತ್ವದಲ್ಲಿರುವ ಸಮಸ್ಯೆಗಳನ್ನು ಗುರುತಿಸಿ ಅವುಗಳ ಮೂಲ ಅಥವಾ ಕಾರಣಗಳನ್ನು ವಿಶ್ಲೇಷಿಸಲು ಸಮರ್ಥರಾಗುವುದು.

- ಕಾರ್ಯಬಾಹುಳ್ಯದಿಂದಾಗಿ ಅಥವಾ ಅಧಿಕ ಬಿಡುಸಮಯ ದಿಂದಾಗಿ ಕಾರ್ಯಹೀನರಾಗಿರುವ ಸ್ಥಿತಿಯಲ್ಲಿ ಉಂಟಾಗುವ ಮಾನಸಿಕ ಒತ್ತಡದಿಂದ ವಿಚಲಿತರಾಗದೆ ಸ್ಥಿಮಿತಕಾಯ್ದು ಕೊಳ್ಳುವ ಸಾಮರ್ಥ್ಯ ಪಡೆಯುವುದು

- ತಮ್ಮದಾದ ಸಮಯವನ್ನು ಸಮರ್ಪಕವಾಗಿ ಉಪಯೋಗಿಸಿ ತನ್ಮೂಲಕ ಮಹತ್ತಮ ತೃಪ್ತಿಯನ್ನು ಪಡೆಯುವ ಅಭ್ಯಾಸ ರೂಢಿಸಿ ಕೊಳ್ಳುವುದು

**ಇಂದಿನ ಜಗತ್ತು ಪರಿವರ್ತನೆಗಳ ಕ್ಷೇತ್ರ. ಇಲ್ಲಿ ಪರಿವರ್ತನೆಗಳೇ ಶಾಶ್ವತ, ನಿರಂತರ. ಇಂಥ ಸ್ಥಿತಿಗೆ ಹೊಂದಿಕೊಂಡು ಉಳಿದು, ಬೆಳೆದು ಬಾಳಲು 'ಜೀವನದ ಕೌಶಲ್ಯ'ಗಳನ್ನು ತಮ್ಮದಾಗಿಸಿ ಕೊಳ್ಳಬೇಕಾಗುವುದು. ಸಮಾಜದ ಮಾರ್ಗದರ್ಶಕ ಮುಂಚೂಣಿ ಪ್ರಜೆಗಳೆನಿಸಿಕೊಳ್ಳುವ ಸ್ಕೌಟ್/ಗೈಡ್ ಬಾಂಧವರಿಗಂತೂ ಇದರ ಸಮಗ್ರ ಅರಿವು ವಿಶೇಷತಃ ಅಗತ್ಯವಾಗಿದೆ.**

- ಸಂಬಂಧಗಳ ಹಾಗೂ ಭಿನ್ನಾಭಿಪ್ರಾಯಗಳ ಸೌಹಾರ್ದ ಯುತ ನಿರ್ವಹಣೆಯ ಸಾಮರ್ಥ್ಯ ವೃದ್ಧಿಸಿಕೊಳ್ಳುವುದು ತನ್ನ ಮಾತು,

*ಶುಭಾಶಯಗಳೊಂದಿಗೆ*

# ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ

ನಂ. 147, ಕಂಬಳಿ ಭವನ, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು-560 001.

*ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ ಆವಶ್ಯಕ ವಸ್ತುಗಳನ್ನು ಜನ ಸಾಮಾನ್ಯರಿಗೆ ತಲುಪಿಸುವ ಕಾರ್ಯ ನಿರ್ವಹಿಸುವ ಸಂಸ್ಥೆಯಾಗಿದೆ.*

*ಈ ಸಂಸ್ಥೆಯು 1973 ರಲ್ಲಿ ಪ್ರಾರಂಭವಾಗಿದ್ದು ಪಡಿತರ ಹಂಚಿಕೆ ಪದ್ಧತಿಯ ಆಹಾರ ಧಾನ್ಯ ಮತ್ತು ಇತರೇ ದಿನ ಬಳಕೆಯ ಆವಶ್ಯಕ ವಸ್ತುಗಳನ್ನು ಸುಲಭವಾಗಿ ನಿಯಮಿತವಾಗಿ ಹಾಗೂ ಯೋಗ್ಯ ದರದಲ್ಲಿ ರಾಜ್ಯದ ಜನತೆಗೆ ತಲುಪಿಸುವಲ್ಲಿ ಶ್ರಮಿಸುತ್ತಿರುವುದು.*

## ನಿಗಮದ ಚಟುವಟಿಕೆಯ ಸಾರಾಂಶ :

★ ರಾಜ್ಯದ ಬಡ ಜನತೆಗೆ ಹಸಿರು ಕಾರ್ಡು ಮೂಲಕ ಕೆ.ಜಿ. 1ಕ್ಕೆ ರೂ. 3.20 ರ ದರದಲ್ಲಿ ಅಕ್ಕಿ ವಿತರಣೆ

★ ರಾಜ್ಯದಾದ್ಯಂತ 148 ಸಗಟು ಮಳಿಗೆ ಹಾಗೂ 277 ಚಿಲ್ಲರೆ ಮಳಿಗೆಗಳ ಮೂಲಕ ಪಡಿತರ ವಿತರಣೆ.

★ '9' ಅಕ್ಷಯ ಮಳಿಗೆಗಳ ಮೂಲಕ ದಿನನಿತ್ಯ ಬಳಕೆಯ ಅನಿಯಂತ್ರಿತ ವಸ್ತುಗಳನ್ನು ಮಾರಾಟ ಮಾಡುವುದು.

★ 13 ಸಂಚಾರಿ ನ್ಯಾಯಬೆಲೆ ಅಂಗಡಿಗಳ ಮೂಲಕ ಗುಡ್ಡಗಾಡು ಜನತೆಯ ಮನೆ ಬಾಗಿಲಿಗೆ ನ್ಯಾಯಬೆಲೆಯಲ್ಲಿ ಆಹಾರ ಧಾನ್ಯ ವಿತರಣೆ.

★ ಬೆಂಗಳೂರು, ಮಂಗಳೂರು, ಪಾಂಡವಪುರ ಮತ್ತು ಯಲ್ಲಾಪುರಗಳಲ್ಲಿ ನಿಗಮದ ಸಗಟು ಮಳಿಗೆಗಳ ಮೂಲಕ ಸೀಮೆಎಣ್ಣೆ ವಿತರಣೆ.

★ ಬೆಂಗಳೂರು ನಗರದ ಕೊಳಚಿ ಪ್ರದೇಶಗಳಲ್ಲಿ ವಾಸಿಸುವ ಬಡವರಿಗೆ ನಿಗಮದ ಚಿಲ್ಲರೆ ಮಳಿಗೆಗಳ ಮೂಲಕ ಅವಶ್ಯಕ ಇಂಧನವಾದ ಸೀಮೆಎಣ್ಣೆ ವಿತರಣೆ.

★ ಕರ್ನಾಟಕ ಕೈಮಗ್ಗ ನಿಗಮದ ಜನತಾ ಬಟ್ಟೆಗಳನ್ನು ನಿಗಮದ ಮೂಲಕ ಅಗ್ಗದ ದರದಲ್ಲಿ ಜನತೆಗೆ ವಿತರಣೆ.

ಇವುಗಳಲ್ಲದೆ ರಾಜ್ಯ ಸರ್ಕಾರವು ಕಾಲ ಕಾಲಕ್ಕೆ ಜನತೆಗೆ ಕೊಡ ಮಾಡುವ ಸೌಲಭ್ಯಗಳನ್ನು ಸರ್ಕಾರೀ ಆದೇಶದಂತೆ ರಾಜ್ಯದ ಜನತೆಗೆ ತಲುಪಿಸುವ ಕಾರ್ಯವನ್ನು ಉತ್ಸುಕತೆಯಿಂದ ನಿರ್ವಹಿಸಲು ನಿಗಮವು ಕಂಕಣ ಬದ್ಧವಾಗಿದೆ.

**ವ್ಯವಸ್ಥಾಪಕ ನಿರ್ದೇಶಕರು**

ಅಭಿವ್ಯಕ್ತಿ, ಬರೆಹ, ನಗೆ, ನಡೆಗಳಿಂದ ಇತರರಲ್ಲಿ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ನಕಾರಾತ್ಮಕ ಪ್ರತಿಕ್ರಿಯೆ ಮೂಡದಂತೆ ನೋಡಿಕೊಳ್ಳುವುದು

- ಮಾನವಿತ ಸಂಬಂಧಗಳ ನಿರ್ವಹಣೆಯಲ್ಲಿ ಮತ್ತು ಸೋಲು ಗೆಲುವುಗಳುಎದುರಾದಾಗಭಾವೋದ್ವೇಗಗಳನ್ನು ನಿಯಂತ್ರಿಸಿ ಕೊಳ್ಳುವ ಸಾಮರ್ಥ್ಯ ಹೊಂದುವುದು

### ಸ್ಕೌಟಿಂಗ್ ಮತ್ತು ಜೀವನ ಕೌಶಲ್ಯಗಳು

ಯುವ ಪೀಳಿಗೆಯನ್ನೂ ಪ್ರೌಢರನ್ನೂ ಇಂದಿನ ಸಮಾಜಕ್ಕೆ ಹೊಂದಿಕೊಳ್ಳುವ ವ್ಯಕ್ತಿಗಳಾಗಿ ರೂಪಿಸುವ ಧ್ಯೇಯೋದ್ದೇಶ ಹೊಂದಿರುವ ಸ್ಕೌಟ್ ಚಳುವಳಿಯು - ಈ ಜನರಲ್ಲಿ ತಮ್ಮ ಜೀವನದ ಗುರಿಯ ನಿರ್ಧಾರಕರು ತಾವೇ ಆಗಿದ್ದೇವೆ, ತಮ್ಮ ಪರಿಸರದ ವ್ಯಾಪ್ತಿಯಲ್ಲಿರುವ ಹಲವು ಕ್ಷೇತ್ರಗಳಲ್ಲಿ ತಮಗೆ ಸೂಕ್ತವಾದದ್ದನ್ನು ಆಯ್ಕೆ ಮಾಡಿಕೊಳ್ಳುವವರು ತಾವೇ ಎಂಬ ಆತ್ಮವಿಶ್ವಾಸವನ್ನು ಮೂಡಿಸಿ ಆ ದೆಸೆಯಲ್ಲಿ ಮುನ್ನಡೆದು ಯಶಸ್ವೀ ಸಮಾಜದ ಪ್ರಜೆಗಳನ್ನಾಗಿಸುವ ಕಾರ್ಯಕ್ರಮವನ್ನು ರೂಪಿಸಿಕೊಂಡಿದೆ. ದೃಶ್ಯ ಅಥವಾ ಅದೃಶ್ಯವಾದ ಬಾಹ್ಯಶಕ್ತಿಗಳ ಪ್ರಚೋದನೆಯಿಂದಾಗಿ ತಮ್ಮನ್ನೇ ಸಾಮರ್ಥ್ಯ ಹೀನರೆಂದು ಗುರುತಿಸಿಕೊಳ್ಳುವ ಜನರಿರುವಲ್ಲಿ ಇಂತಹ ಕಾರ್ಯಕ್ರಮವು ಅತ್ಯಗತ್ಯವಾಗಿದೆ. ' ಜೀವನ ಕೌಶಲ್ಯ ವಿಧಾನವು ಸೂಚಿಸುವಂತೆ ಆ ಜನರು 'ಆಂತರಿಕವಾಗಿ ಎಚ್ಚರ' ಗೊಂಡರೆ, ತಮ್ಮ ಬದುಕಿನ ಬಾಧಕಗಳ ಕುರಿತಾದ ನಿರ್ಣಯಗಳಲ್ಲಿ ಭಾಗಿಗಳಾಗಿ ತಮ್ಮ ಸುವ್ಯವಸ್ಥಿತ, ಸದೃಢ ಸಮಾಜಕ್ಕೆ ಪೂರಕ ಕೊಂಡಿಗಳಾಗಬಹುದು

'ಜೀವನ ಕೌಶಲ್ಯ' ಗಳು ಸ್ವಸಾಮರ್ಥ್ಯ ವರ್ಧನೆಯ ಕಾರ್ಯಕ್ರಮಗಳು. ಅಧಿಕಾರವು ಕೆಲವೇ ಹುದ್ದೆಗಳಲ್ಲಿ ಕೇಂದ್ರಿಕರಿಸಲ್ಪಟ್ಟ ಅಥವಾ ಹಲವು ಸ್ತರಗಳಲ್ಲಿ ವ್ಯವಸ್ಥಿತಗೊಂಡ ಸಂಘಟನೆಗಳಲ್ಲೂ ಪ್ರಸ್ತುತವೆನಿಸುವ ಈ ಬದುಕಿನ ಅಗತ್ಯಗಳು ಯಶಸ್ವೀ ಬದುಕಿನ ಸೋಪಾನಗಳು. ಸ್ಕೌಟಿಂಗ್ ಚಳುವಳಿಯ ಕಾರ್ಯಕ್ರಮಗಳು 'ಮಾಡಿ-ಕಲಿ' ತತ್ವವನ್ನು ಒಳಗೊಂಡಿದ್ದು ಅನುಭವಗಳನ್ನು ಕರಗತ ಮಾಡಿಕೊಳ್ಳುವ ವಿಧಾನಗಳಾಗಿವೆ. ಅನೌಪಚಾರಿಕ ಕಲಿಕಾ ಮಾಧ್ಯಮಗಳಲ್ಲೇ ಮಹತ್ತರ ಪ್ರಾಮುಖ್ಯತೆ ಹೊಂದಿರುವ ಸ್ಕೌಟಿಂಗ್ ಚಟುವಟಿಕೆಗಳು ವಿದ್ಯಾರ್ಥಿಯಲ್ಲಿ ವೈಯಕ್ತಿಕ ಕರ್ತೃತ್ವವನ್ನು ಉದ್ದೀಪಿಸಿ ಆತ್ಮ ಸ್ಥೈರ್ಯವನ್ನು ವೃದ್ಧಿಸುವುದರ ಮೂಲಕ ಔಪಚಾರಿಕ ಕಲಿಕೆಗೆ ಪೂರಕವೆನಿಸಿದೆ.

'' ಸ್ಕೌಟಿಂಗ್ / ಗೈಡಿಂಗ್ ತರಬೇತಿ ಕಾರ್ಯಕ್ರಮಗಳಲ್ಲಿ '' ಜೀವನ ಕೌಶಲ್ಯಗಳು '' ಪಾಠಪಟ್ಟಿಯ ಅಂಶವಲ್ಲ. ಅವು ಪ್ರತಿಯೊಂದು ಚಟುವಟಿಕೆಯಲ್ಲಿ ಅಂತರ್ಗತವಾದ ಸತ್ವಗಳು. ಮಕ್ಕಳ ಕಾರ್ಯಕ್ರಮಗಳಲ್ಲಾಗಲೀ ಪ್ರೌಢರಿಗಾಗಿರುವ ತರಬೇತಿ ಕಾರ್ಯಕ್ರಮಗಳಲ್ಲಾಗಲೀ ಮನಸ್ಸಿನ ಒಳಗನ್ನು ಅರಿಯುವ ಹೃದಯ ಸ್ಪರ್ಶಿಯಾದ ಚಟುವಟಿಕೆಗಳು ಇಂತ ಕೌಶಲ್ಯಗಳಿಗೆ ಒತ್ತುಕೊಡುತ್ತವೆ.

ಸ್ಕೌಟಿಂಗ್ ಮತ್ತು ಗೈಡಿಂಗ್ ನೈಜ ಅರ್ಥದಲ್ಲಿ, ಅಡಕವಾಗಿರುವ ನೈಜ ತತ್ವಾನುಸಾರ ಸ್ವೀಕರಿಸಲ್ಪಡುವಲ್ಲಿ, ಅನುಭವಿಸಲ್ಪಡುವಲ್ಲಿ ಬದುಕೆಂಬುದು ತನಗೂ ಸಮಾಜಕ್ಕೂ ಹೊರೆಯೆನಿಸುವುದಿಲ್ಲ. ಅದು ತನ್ನ ಮಟ್ಟಿಗೆ ಆತ್ಮವಿಶ್ವಾಸದಿಂದ ಪ್ರದರ್ಶಿಸಬಲ್ಲ ಕೌಶಲ್ಯವಾಗುತ್ತದೆ. '' ಆತನನ್ನು ನೋಡಿ ಬದುಕಲು ಕಲಿ '' ಎಂದು ಹೇಳಿಸಿಕೊಳ್ಳುವ ಆಕರ್ಷಕ ವಿಧಾನವಾಗುತ್ತದೆ. 'ಯಾಕಪ್ಪ ಬದುಕಬೇಕು' ಎಂಬ ವೈರಾಗ್ಯದ ಉದ್ಗಾರದ ಬದಲು ಜೀವನವು ಕಲಕಲ ಹರಿಯುವ ಝರಿಯಂತೆ ಸ್ವಚ್ಛ, ನೆಮ್ಮದಿಯ ಬದಲಾವಣೆಗಳ ಸರಪಣಿಯಾಗುತ್ತದೆ. ದಾಸವಾಣಿ ಅರ್ಥ ಪೂರ್ಣವಾಗುತ್ತದೆ. □

## ನಮ್ಮ ಜಿಲ್ಲೆ

### ಮಧುಗಿರಿ

ಬೆಟ್ಟಗಳಿಂದ ಸುತ್ತುವರೆಯಲ್ಪಟ್ಟಿರುವ ಮಧುಗಿರಿ ದಾಳಿಂಬೆ ಹಣ್ಣುಗಳಿಗೆ ಪ್ರಸಿದ್ಧಿ ಪಡೆದಿದೆ. ರಾಜ್ಯದಲ್ಲೇ ಅತ್ಯುತ್ತಮವಾದ ದುರ್ಗದ ಕೋಟೆ ಮಧುಗಿರಿಯಲ್ಲಿದ್ದು ವಿಜಯನಗರದ ಸಾಮಂತ ರಾಜರೊಬ್ಬರ ರಾಜಧಾನಿಯಾಗಿತ್ತು. 1763 ರಲ್ಲಿ ಹೈದರ್ ಆಲಿ ಕೆಳದಿ ಸಂಸ್ಥಾನದ ಮಹಾರಾಣಿ ವೀರಮ್ಮಾಜಿ ಮತ್ತು ಅವಳ ಮಗನನ್ನು ಪದಚ್ಯುತರನ್ನಾ ಮಾಡಿದ್ದು ಮಧುಗಿರಿಯಲ್ಲಿ. ಕೋಟೆಗೆ ಸೇರಿದಂತೆ ಜೈನ ದೇವಾಲಯ 'ಮಲ್ಲಿನಾಥ ಬಸದಿ' ಇದೆ. ಇದಲ್ಲದೇ ಮಲ್ಲೇಶ್ವರ ಹಾಗೂ ವೆಂಕಟರಮಣಸ್ವಾಮಿಯ ದೇವಾಲಯಗಳೂ ಇವೆ. ಈ ದೇವಾಲಯಗಳಲ್ಲಿರುವ ಬೃಹದಾಕಾರದ ಕಂಬಗಳ ಮೇಲೆ ದೀಪಗಳನ್ನು ಬೆಳಗುತ್ತಾರೆ.

ಮಧುಗಿರಿಯಲ್ಲಿ 'ಚನ್ನಯ್ಯನ ಭಾವಿ', 'ಅರಸನ ಬಾವಿ', ' ಪ್ರಧಾನರ ಭಾವಿ 'ಯೇ ಮುಂತಾದ ಅನೇಕ ಭಾವಿಗಳಿವೆ. ಇವುಗಳಲ್ಲೆಲ್ಲಾ ನೀರಿನ ಬಳಿಗೆ ತಲುಪಲು ಸುಂದರ ಕೆತ್ತನೆಗಳಿಂದ ಅಲಂಕೃತವಾದ ಮೆಟ್ಟಿಲುಗಳನ್ನಿಡಲಾಗಿದೆ.

### ಪಾವಗಡ

ಪಾವಗಡ ಅಥವಾ ನಾಗಬೆಟ್ಟ ಎಂಬ ಹೆಸರುಗಳೂ ಇದ್ದ ಪಾವಗಡಕ್ಕೆ ಸರ್ಪವನ್ನು ಕೊರೆದಿದ್ದ ಕಲ್ಲೊಂದರಿಂದ ಆ ಹೆಸರು ಬರಲು ಕಾರಣವಾಯಿತು. ಇಲ್ಲಿನ ಕೋಟೆಗಳು 1405ರಲ್ಲಿ ವಿಜಯನಗರ ರಾಜರುಗಳಿಂದ ಕಟ್ಟಲ್ಪಟ್ಟಿದ್ದು, ವಿಜಯನಗರ ಸಾಮ್ರಾಜ್ಯದ ಸಾಮಂತ ರಾಜರೊಬ್ಬರ ಕಾರ್ಯಸ್ಥಾನವಾಗಿತ್ತು. ಭದ್ರವಾದ ಕೋಟೆಗಳಿಂದ ಆವೃತವಾಗಿದ್ದು, ಸಮುದ್ರಮಟ್ಟದಿಂದ 3000 ಅಡಿಗಳಷ್ಟು ಎತ್ತರದಲ್ಲಿರುವ ಗಿರಿನಗರ, ಪಾವಗಡ, ರತ್ನಗಿರಿ, ನಿಡುಗಲ್ ಹಾಗೂ ರಾಯದುರ್ಗದ ಪಾಳೆಯಗಾರರ ಆಕ್ರಮಣಕ್ಕೆ ತುತ್ತಾಗಿತ್ತು. ಮರಾಠರ ಆಕ್ರಮಣಕ್ಕೆ ತುತ್ತಾಗಿದ್ದ ಪಾವಗಡವನ್ನು ಹೈದರ ಆಲಿಯು ಗೆದ್ದು ಕೋಟೆಯನ್ನು ಭದ್ರಪಡಿಸಿದನು. ಶ್ರೀರಂಗಪಟ್ಟಣದಲ್ಲಿ ನಡೆದ ಸಮರದ ಕಾಲದಲ್ಲಿ ಮರಾಠರ ಹಾಗೂ ಆಂಗ್ಲರ ಸಂಘಟಿತ ಬಲಕ್ಕೆ ಈ ಕೋಟೆ ಮಣಿಯಿತು. ಒಪ್ಪಂದವೇರ್ಪಟ್ಟ ನಂತರದಲ್ಲಿ ಈ ಕೋಟೆಯನ್ನು ಟಿಪ್ಪುಸುಲ್ತಾನ್ 1791ರಲ್ಲಿ ಮರಳಿ ಪಡೆದ.

# ತುಮಕೂರು ಜಿಲ್ಲೆಯ ಇತಿಹಾಸ - ಒಂದು ಟಿಪ್ಪಣಿ

**ಡಾ|| ಎಚ್.ಎಸ್. ಗೋಪಾಲರಾವ್**
ಕಾರ್ಯದರ್ಶಿ, ಕರ್ನಾಟಕ ಇತಿಹಾಸ ಅಕಾಡೆಮಿ
ಬೆಂಗಳೂರು

ಪೌರಾಣಿಕ ಕಾಲದಿಂದಲೂ ಪ್ರಸಿದ್ಧಿ ಪಡೆದಿರುವ ತುಮಕೂರು ಜಿಲ್ಲೆಯು ಪ್ರಾಕ್ಚಾರಿತ್ರಿಕ ಯುಗದ ಅವಶೇಷಗಳಿಗೂ ಪ್ರಸಿದ್ಧವಾಗಿದೆ. ಇತಿಹಾಸ ಕಾಲದಲ್ಲಂತೂ ಕರ್ನಾಟಕದ ರಾಜಕೀಯ ಇತಿಹಾಸಕ್ಕೆ ತುಮಕೂರು ಜಿಲ್ಲೆಯ ಕೊಡುಗೆ ಗಣನೀಯವಾದುದು.

ತುಮಕೂರು ಜಿಲ್ಲೆಯ ಗುಬ್ಬಿ ತಾಲೂಕಿನ ಕಡಬ, ತುರುವೇಕೆರೆ ತಾಲೂಕಿನ ಸಂಪಿಗೆ ಮತ್ತು ತುಮಕೂರು ತಾಲೂಕಿನ ಮುಳುಕುಂಟೆಗಳು ರಾಮಾಯಣ ಮತ್ತು ಮಹಾಭಾರತಗಳ ಕಥೆಗಳೊಂದಿಗೆ ಸಂಬಂಧ ಪಡೆದಿವೆ. ಕಡಬ ಎಂಬ ಹೆಸರು ಅಲ್ಲಿ ಕದಂಬ ಋಷಿಯ ಆಶ್ರಮವಿದ್ದುದರಿಂದ ಬಂದದ್ದು ಎಂಬ ನಂಬಿಕೆಯಿದೆ. ಶ್ರೀ ರಾಮನು ಲಂಕೆಯಿಂದಸೀತೆಯೊಡನೆಹಿಂದಿರುಗುತ್ತಿದ್ದಾಗ,ಕಡಬದಲ್ಲಿಕದಂಬಋಷಿಗಳ ಅತಿಥಿಯಾಗಿ ಉಳಿದು, ಅಲ್ಲಿ ಸೀತೆಯ ಕೋರಿಕೆಯಂತೆ ಹರಿಯುತ್ತಿದ್ದ ನದಿಗೆ ಅಡ್ಡಗಟ್ಟೆ ಹಾಕಿಸಿದನಂತೆ ಹಾಗೆ ನಿರ್ಮಿತವಾದುದು ಕಡಬದ ಕೆರೆ ಎಂಬ ಕಥೆಯಿದೆ. ಅದೇ ಸಮಯದಲ್ಲಿ ಶ್ರೀರಾಮನು ಮುಳುಕುಂಟೆ (ಆಗ ಅನಂತಪುರ ಅಗ್ರಹಾರ) ಯಲ್ಲಿ ತಂಗಿ, ಯಾಗವೊಂದನ್ನು ಆಚರಿಸಿ, ನಿರ್ಮಿಸಿದ ದೇವಾಲಯ ರಾಮೇಶ್ವರ ದೇವಾಲಯ ಎಂದೂ ಹೇಳುತ್ತಾರೆ. ಕಡಬದಲ್ಲಿ ಸೀತಮ್ಮನವರ ಪೆಟ್ಟಿಗೆ, ರಾವಣನ ನಾಲಿಗೆ ಎಂದು ಕೆಲವು ಕಲ್ಲುಗಳನ್ನು ತೋರಿಸುವಂತೆ ಮುಳುಕುಂಟೆಯ ಕೆರೆಯ ಏರಿಯ ಅಂಚಿನಲ್ಲೊಂದು ಸ್ಥಳವನ್ನು ಯಾಗ ನಡೆದ ಸ್ಥಳ ಎಂದೂ ತೋರಿಸುತ್ತಾರೆ. ತುರುವೇಕೆರೆ ತಾಲ್ಲೂಕಿನ ಸಂಪಿಗೆಯು ಮಹಾಭಾರತ ಕಾಲದ ಚಂಪಕನಗರ ಎಂದೇ ಭಾವಿಸಲಾಗಿದೆ. ಅದು ಹಂಸಧ್ವಜನ ಮಗ ಸುಧನ್ವನ ರಾಜಧಾನಿಯಾಗಿತ್ತು ಎಂದು ಹೇಳುತ್ತಾರೆ. ಕುಷ್ಠರೋಗಿಯಾದ ದೃಗ ಮಹರ್ಷಿ ಮಿಂದು ರೋಗ ಪರಿಹಾರ ಮಾಡಿಕೊಂಡ ನಾಗಿಣೀ ನದಿಯೇ, ಇಂದು ದೊಡ್ಡ ಕೆರೆಯಾಗಿ ನಿಂತಿರುವ ಕುಣಿಗಲ್ ಕೆರೆ ಎಂಬ ಕಥೆಯಿದೆ. ಹಾಗೆಯೇ ತುರುವೇಕೆರೆಯ ಬಳಿಯ ಹಳೇತಂಡುಗದಲ್ಲಿ ಶಾಲೀವಾಹನ (ಶಕಪುರುಷ) ಹುಟ್ಟಿದ ಎಂದೂ ನಂಬಲಾಗಿದೆ.

ಮೇಲೆ ಹೇಳಿದ ಎಲ್ಲಾ ಪ್ರತೀತಿ, ನಂಬಿಕೆಗಳೂ ಪುರಾಣ ಸಂಬಂಧಿಯಾದುವು. ಇವು ಪರಂಪರಾನುಗತ ನಂಬಿಕೆಗಳು ; ಇವುಗಳನ್ನು ಪ್ರಶ್ನಿಸುವುದು ಸುಲಭ ; ಅಲ್ಲಗಳೆಯಲಾಗಲೀ, ಸಮರ್ಥಿಸಲಾಗಲೀ ಆಧಾರಗಳಿಲ್ಲ. ಆದ್ದರಿಂದ ನಂಬಿಕೆಗಳನ್ನು ಆ ಮಟ್ಟದಲ್ಲೇ ಸ್ವೀಕರಿಸಿ ಮೌನ ತಾಳುವುದು ಸೂಕ್ತ. ಪ್ರಾಕ್ಚಾರಿತ್ರಿಕ ಯುಗದ ಹಲವಾರು ನೆಲೆಗಳು ತುಮಕೂರು ಜಿಲ್ಲೆಯಲ್ಲಿ ಕಂಡು ಬಂದಿವೆ. ಇವುಗಳಲ್ಲಿ ಪ್ರಮುಖವಾದುವು ತಿಪಟೂರು ತಾಲ್ಲೂಕಿನ ಕಿಬ್ಬನಹಳ್ಳಿ ಮತ್ತು ಬಿಳಿಗೆರೆ. ಬಿಳಿಗೆರೆಯ ಸಮೀಪದ ನಿವೇಶನದಲ್ಲಿ ಕಲ್ಲಿನ ಕೊಡಲಿ, ವಕ್ರಾಕೃತಿಯ ಗರಗಸ, ಬಾಲದ ತುದಿ ಕತ್ತರಿಸುವ ಉಳಿ, ತೂಗುಕೊಂಡಿ ಇತ್ಯಾದಿಗಳು ದೊರೆತಿವೆ. ಪ್ರಾಕ್ಚಾರಿತ್ರಿಕ ಯುಗದ ಶಿಲಾಯುಧಗಳ ಕಾರ್ಖಾನೆಯಾಗಿತ್ತು ಎಂದೇ ನಿರ್ಧಾರಿತವಾಗಿದೆ. ಹಾಗೆಯೇ ಕಿಬ್ಬನಹಳ್ಳಿಯೂ ಒಂದು ಆಯುಧ ತಯಾರಿಕೆಯ ಕಾರ್ಖಾನೆಯಾಗಿತ್ತು ಎಂದೇ ಪರಿಗಣಿತವಾಗಿದ್ದು ಇಲ್ಲಿ ಕೈಗೊಡಲಿ, ಮಚ್ಚು, ತುರಿಮಣೆ ಇತ್ಯಾದಿ ಆಯುಧಗಳು ದೊರೆತಿವೆ. ಕಿಬ್ಬನಹಳ್ಳಿಯಲ್ಲಿ ಬೃಹತ್ ಶಿಲಾಯುಗ ಕಾಲದ ಶಿಲಾಗೋರಿಗಳೂ ದೊರೆತಿವೆ. ರಂಧ್ರಗಳಿರುವ ಎಂಟು ಚದರಡಿ ಕಲ್ಲು ಚಪ್ಪಡಿಗಳನ್ನು ಈ ಶಿಲಾಗೋರಿಗಳಿಗೆ ಬಳಸಲಾಗಿದೆ. ಈಚೆಗೆ ಶ್ರೀ ಕೆ.ಬಿ. ಶಿವತಾರಕ್ ಅವರು ದೇವರಾಯನದುರ್ಗದ ಬೆಟ್ಟಸಾಲಿನಲ್ಲೂ ಪ್ರಾಕ್ಚಾರಿತ್ರಿಕ ಯುಗದ ನೆಲೆಗಳನ್ನು ಪತ್ತೆ ಹಚ್ಚಿದ್ದಾರೆ.

**ಮೈಸೂರು ಅರಸರ ಕಾಲದಲ್ಲಿ ಒಗ್ಗೂಡಿದ ತುಮಕೂರು ಜಿಲ್ಲೆ ಅಂದಿನಿಂದಲೂ, ಅವರ ಒಡೆತನದಲ್ಲಿ ಪ್ರಾಶಸ್ತ್ಯಪಡೆಯಿತು. ಈಗಲೂ ತುಮಕೂರು ಜಿಲ್ಲೆಯಲ್ಲಿ ಹೊಸ ಶಾಸನಗಳು ಹಸ್ತಪ್ರತಿಗಳು ದೊರೆಯುತ್ತಿದ್ದು ತುಮಕೂರು ಜಿಲ್ಲೆಯ ಇತಿಹಾಸವನ್ನು ಮತ್ತಷ್ಟು ಖಚಿತವಾಗಿ ಪುನರ್‌ರಚಿಸಬಹುದು.**

ಕರ್ನಾಟಕವನ್ನಾಳಿದ ಆರಂಭಕಾಲದ ಅರಸು ಮನೆತನಗಳಲ್ಲೊಂದಾದ ಗಂಗರು ತುಮಕೂರು ಜಿಲ್ಲೆಯ ಬಹುಭಾಗವನ್ನು ಕ್ರಿ.ಶ. 3ನೆಯ ಶತಮಾನದಿಂದ ಕ್ರಿ.ಶ. 11ನೆಯ ಶತಮಾನದವರೆಗೂ ಆಳಿದರು. ಗಂಗವಾಡಿ 96000ದ ಒಂದು ಭಾಗವಾಗಿದ್ದ ತುಮಕೂರು ಜಿಲ್ಲೆಯಲ್ಲಿ ದೊರೆತಿರುವ ಅತ್ಯಂತ ಪ್ರಾಚೀನ ಬರಹದ ದಾಖಲೆ ಎಂದರೆ 2ನೇ ಮಾಧವನ ಮೆಳೇಕೋಟೆ ತಾಮ್ರಶಾಸನಗಳು. ಇದು ಅಪೂರ್ಣವಾಗಿ ದೊರೆತಿದ್ದರೂ ಆ ಕಾಲದಲ್ಲಿ ಅಲ್ಲಿನ ಬೌದ್ಧ ವಿಹಾರವೊಂದಕ್ಕೆ ನೀಡಿದ ದಾನದ ಉಲ್ಲೇಖವಾಗಿದ್ದು ಬಹು ಮುಖ್ಯ ದಾಖಲೆಯಾಗಿದೆ. ಈಚೆಗೆ ಹೊನ್ನುಡಿಕೆಯ ಸಮೀಪ ಜಲಗಾರ ದಿಬ್ಬದಲ್ಲಿ ದೊರೆತಿರುವ ಶಿಲಾಶಾಸನವೊಂದರ ಕಾಲದ ಬಗ್ಗೆ ಈ ಲೇಖಕನಿಗೂ ಅನೇಕ ವಿದ್ವಾಂಸರಿಗೂ ಭಿನ್ನಾಭಿಪ್ರಾಯಗಳಿವೆ. ಈ ಲೇಖಕನ ತೀರ್ಮಾನದಂತೆ ಆ ಶಾಸನದ ಕಾಲವು ಕ್ರಿ.ಶ.ಸು. 390 ಆಗಿದ್ದು, ಅದು ಈ ಜಿಲ್ಲೆಯ ( ಹಾಗೂ ಕರ್ನಾಟಕದ ) ಅತ್ಯಂತ ಪ್ರಾಚೀನ ಕನ್ನಡ ಶಾಸನವಾಗುತ್ತದೆ. ಆದರೆ ಅನೇಕ ವಿದ್ವಾಂಸರು ಆ ಶಾಸನದ ಕಾಲವನ್ನು ಕ್ರಿ.ಶ. 650 ಎಂದು ನಿರ್ಧರಿಸಿದ್ದಾರೆ. ಹಾಗೆ ಒಪ್ಪಿತವಾದರೂ ಅದೊಂದು ಮಹತ್ವದ ದಾಖಲೆಯಾಗಿ, ದೊರೆತಿರುವ ಗಂಗರ ದೊರೆ ಶ್ರೀ ವಿಕ್ರಮನ ಎರಡನೆಯ ಶಿಲಾಶಾಸನವಾಗುತ್ತದೆ. ಈ ಭಿನ್ನಾಭಿಪ್ರಾಯದ ಶಾಸನದ ಬಗ್ಗೆ ಚರ್ಚೆ ಈಗ ಅನವಶ್ಯಕ. ಸದ್ಯಕ್ಕೆ ತುಮಕೂರು ಜಿಲ್ಲೆಯ ಅತ್ಯಂತ ಪ್ರಾಚೀನ ದಾಖಲೆ 2ನೆ ಮಾಧವನ ಮೆಳೇಕೋಟೆ ತಾಮ್ರಶಾಸನವೆಂದು ಒಪ್ಪಿಕೊಂಡು ಮುಂದುವರಿದರೆ, ನಂತರದ ಪ್ರಮುಖ ದಾಖಲೆ ಹೆಬ್ಬೂರಿನ ನವಕಾಮ ( ದುರ್ವಿನೀತ )ನ ತಾಮ್ರ ಶಾಸನವಾಗುತ್ತದೆ. ಕ್ರಿ.ಶ. 545ರ ಈ ಶಾಸನದಲ್ಲಿ

ಪೂಜ್ಯಪಾದನ ' ಶಬ್ದಾವತಾರ ' ಕೃತಿಯ ಉಲ್ಲೇಖವಿದೆ.

ಕ್ರಿ.ಶ. 725 ರಿಂದ 788 ರವರೆಗೆ ಗಂಗರಾಜ್ಯವನ್ನಾಳಿದ ಶ್ರೀ ಪುರುಷನ ಅನೇಕ ವೀರಗಲ್ಲು ಶಾಸನಗಳು ತುಮಕೂರು ಜಿಲ್ಲೆಯಲ್ಲಿ ದೊರೆತಿವೆ. ಇವುಗಳಲ್ಲಿ ಬಹುಮುಖ್ಯವಾದುವು ಹಿರೇಗುಂಡಗಲ್ಲಿನ ವೀರಗಲ್ಲುಗಳು. ಗಂಗರಿಗೂ ಮತ್ತು ರಾಷ್ಟ್ರಕೂಟರಿಗೂ ನಡೆದ ಯುದ್ಧಗಳ ಉಲ್ಲೇಖವಿರುವ ಈ ಶಾಸನಗಳ ಮೂಲಕ ರಾಷ್ಟ್ರಕೂಟ 1ನೆಯ ಕೃಷ್ಣ ಮತ್ತು ಗಂಗ ಶ್ರೀ ಪುರುಷರ ನಡುವೆ ಸಿಂಧನೂರು, ಕಾಗಿಮೊಗೆಯೂರು, ಬಾಗೆಯೂರು ಇತ್ಯಾದಿ ಊರುಗಳಲ್ಲಿ ಯುದ್ಧ ನಡೆಯಿತೆಂದು ತಿಳಿದು ಬರುತ್ತದೆ. ತಿಪಟೂರು ಸಮೀಪದ ಈಚನೂರು ಆಗಿನ ಸಿಂಧನೂರು, ಗುಬ್ಬಿಯ ಸಮೀಪದ ಬಾಗೂರು ಆಗಿನ ಬಾಗೆಯೂರು ಎಂದು ಊಹಿಸಲಾಗಿದೆ. ಕಾಗಿಮೊಗೆಯೂರು ಯಾವುದೆಂದು ಊಹಿಸಲೂ ಸುಳಿವುಗಳು ದೊರೆತಿಲ್ಲ. ಆದರೆ ಯಾವುದೇ ಊಹೆಯನ್ನು ಪುಷ್ಟೀಕರಿಸಲು ಮತ್ತಷ್ಟುಪೂರಕ ಆಧಾರಗಳು ಸದ್ಯಕ್ಕೆ ದೊರೆತಿಲ್ಲ. ಹಿರೇಗುಂಡಗಲ್ಲಿನ ವೀರಗಲ್ಲು ಶಾಸನಗಳೆಲ್ಲವೂ ಆ ಕಾಲದ ಸಾಮಾಜಿಕ ಮತ್ತು ಸಾಂಸ್ಕೃತಿಕ ಇತಿಹಾಸದ ದೃಷ್ಟಿಯಿಂದ ಮಡಿದ ' ಮನೆಮಗ ' ಎಂದು ಹೆಸರು ಪಡೆದ ಅನೇಕ ವೀರರ ಸ್ಮಾರಕ ಶಿಲೆಗಳೂ ಆಗಿವೆ.

ಈಚೆಗೆ ಹೊನ್ನುಡಿಕೆಯ ಸಮೀಪ ಜಲಗಾರ ದಿಬ್ಬದಲ್ಲಿ ದೊರೆತ ಶ್ರೀಪುರುಷನ ಶಿಲಾಶಾಸನವು ಪೊನ್ನುಡಿಕೆ ಎಳ್ಪತ್ತು ( 70 ) ಎಂಬ ಆಡಳಿತ ವಿಭಾಗವನ್ನೂ ಅಲ್ಲಿನ ಭಟರಕಿಯ ದೇವಾಲಯವೊಂದನ್ನು ಉಲ್ಲೇಖಿಸಿದೆ. ನೊಳಂಬ ಕುಲಾಂತಕ ಎಂದು ಬಿರುದು ಪಡೆದಿದ್ದ ಗಂಗ ಮೂರನೆಯ ಮಾರಸಿಂಹನ ಕ್ರಿ.ಶ. 972 ರ ಶಿಲಾಶಾಸನವೊಂದು ತಿಪಟೂರು ತಾಲ್ಲೂಕಿನಲ್ಲಿ ದೊರೆತಿದೆ. ಗಂಗರಿಗೆ ಸಂಬಂಧಿಸಿದಂತೆ ಜಿಲ್ಲೆಯಲ್ಲಿ ಅದೇ ಕೊನೆಯ ಉಲ್ಲೇಖ ಕ್ರಿ.ಶ. 4ನೆಯ ಶತಮಾನದಿಂದ 10ನೆಯ ಶತಮಾನದವರೆಗೆ ಸುಮಾರು 600ವರ್ಷಗಳ ಕಾಲ ಗಂಗರು ತುಮಕೂರು ಜಿಲ್ಲೆಯ ಬಹುತೇಕ ಭಾಗಗಳನ್ನಾಳಿದ್ದರು.

ಬಾದಾಮಿಯ ಚಾಲುಕ್ಯರು ತುಮಕೂರು ಜಿಲ್ಲೆಯನ್ನಾಳಿದ್ದಕ್ಕೆ ಕೆಲವು ಮಾಹಿತಿಗಳು ನಮಗೆ ದೊರಕಿವೆ. ಈಗಾಗಲೇ ತಿಳಿಸಿರುವಂತೆ ರಾಷ್ಟ್ರಕೂಟರಿಗೂ, ಗಂಗರಿಗೂ ನಡೆದ ಹಲವು ಯುದ್ಧಗಳನ್ನು ಹಲವಾರು ಶಾಸನಗಳು ದಾಖಲಿಸಿವೆ. ಕ್ರಿ.ಶ. 781 ರಲ್ಲಿ ಶಿವಮಾರನನ್ನು ರಾಷ್ಟ್ರಕೂಟರು ಸೆರೆಹಿಡಿದು, ಗಂಗವಾಡಿಗೆ ಮಾಂಡಳಿಕನನ್ನು ನೇಮಿಸಿದರು. ಹಾಗೆ ನೇಮಿತನಾದ ಮಾಂಡಳಿಕನ ಹೆಸರು ಚಾಕಿರಾಜ. ಕಡಬದ ತಾಮ್ರಶಾಸನಗಳು ಯುದ್ಧವೊಂದರಲ್ಲಿ ಧಾರಾವರ್ಷನಿಗೆ ಆದ ಹಾನಿಯನ್ನು ವಿವರಿಸಿವೆ. ಅದೇ ಶಾಸನವು 1ನೆಯ ಕೃಷ್ಣನು ನಿರ್ಮಿಸಿದ್ದ ಕನ್ನೇಶ್ವರ ದೇವಾಲಯವನ್ನು ಹೆಸರಿಸಿದೆ. ಬಹುಶಃ ಆ ಕನ್ನೇಶ್ವರ ದೇವಾಲಯವೇ ಎಲ್ಲೋರದಲ್ಲಿ 1ನೆಯ ಕೃಷ್ಣ ನಿರ್ಮಿಸಿರುವ ಕೈಲಾಸ ದೇವಾಲಯವಿರಬೇಕು. ಧಾರಾವರ್ಷನ ಆಳ್ವಿಕೆಯ ಸಮಯದಲ್ಲಿ ಕುಣಿಗಲ್ ದೇಶವನ್ನು ವಿಮಲಾದಿತ್ಯನೆಂಬ ಮಾಂಡಳಿಕ ಆಳುತ್ತಿದ್ದ. ಇವನು ಚಾಲುಕ್ಯ ವಂಶಕ್ಕೆ ಸೇರಿದವನಾಗಿರಬೇಕು. ರಾಷ್ಟ್ರಕೂಟ 2ನೆಯ ಕೃಷ್ಣನ ಆಳ್ವಿಕೆಯ ಕಾಲದಲ್ಲಿ ದಾಮಪಯ್ಯ ಎಂಬ ದಂಡನಾಯಕನು ಮಣ್ಣೆಯಲ್ಲಿದ್ದ. ಗಂಗರು ಶಿವಮಾರನ ನಂತರ ರಾಷ್ಟ್ರಕೂಟರ ಮಾಂಡಳಿಕರಾಗಿಯೇ ಉಳಿದರು. ಸ್ವತಂತ್ರ ರಾಜರ ಅಸ್ತಿತ್ವವನ್ನು ಆಗ ಕಳೆದುಕೊಂಡ ಅವರು ಕೊನೆಯವರೆಗೂ ಮಾಂಡಳಿಕರಾಗಿಯೇ ಆಳಿದರು.

ಕ್ರಿ.ಶ. 11ನೆಯ ಶತಮಾನದ ನಂತರ ಇಡೀ ತುಮಕೂರು ಜಿಲ್ಲೆಯು ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿತು. ಹೊಯ್ಸಳರು ಕ್ರಿ.ಶ. 1220ರವರೆಗೂ ಕಲ್ಯಾಣ ಚಾಲುಕ್ಯರ ಸಾಮಂತರಾಗಿಯೇ ರಾಜ್ಯವಾಳಿದರು. ಆದ್ದರಿಂದ ಅವರ ಕಾಲದ ಎಲ್ಲಾ ಶಾಸನಗಳಲ್ಲೂ ಸಾಮಾನ್ಯವಾಗಿ ಆರಂಭದಲ್ಲಿ ಕಲ್ಯಾಣ ಚಾಲುಕ್ಯ ಪ್ರಭುತ್ವದ ಉಲ್ಲೇಖವಿರುತ್ತದೆ. ಹೊಯ್ಸಳರ ಆಳ್ವಿಕೆಯ ಬಗೆಗೆ ವಿವರವಾಗಿ ಪ್ರಸ್ತಾಪಿರುವ ಮೊದಲು ಗಂಗರಿಗೆ ಸಮಕಾಲೀನರಾಗಿ ಆಳ್ವಿಕೆ ನಡೆಸಿದ ನೊಳಂಬರಿಗೂ ತುಮಕೂರು ಜಿಲ್ಲೆಗೂ ಇರುವ ಸಂಬಂಧದ ಬಗೆಗೆ ತಿಳಿಯುವುದು ಸೂಕ್ತ.

ಪಲ್ಲವ ವಂಗಾನ್ವಯರೆಂದು ಕರೆದುಕೊಳ್ಳುವ ನೊಳಂಬರ ಆಳ್ವಿಕೆಯ ಪ್ರದೇಶ ನೊಳಂಬವಾಡಿ 32000 ಅವರ ರಾಜಧಾನಿ ಹಿಂದೆ ಕರ್ನಾಟಕದ ಪಾವಗಡಕ್ಕೆ ಸಮೀಪವಿದ್ದ ಹೇಮಾವತಿ (ಹೆಂಜೇರು). ಈಗ ಅದು ಆಂಧ್ರಪ್ರದೇಶಕ್ಕೆ ಸೇರಿದ್ದರೂ ನೊಳಂಬವಾಡಿ 32000ದ ಹಲವು ಪ್ರದೇಶಗಳು ವಿಶೇಷವಾಗಿ ಮಧುಗಿರಿ, ಸಿರಾ ಮತ್ತು ಪಾವಗಡ ತಾಲ್ಲೂಕುಗಳು ತುಮಕೂರು ಜಿಲ್ಲೆಗೇ ಸೇರಿವೆ. ಸಿರಾ ತಾಲ್ಲೂಕಿನಲ್ಲಿ ದೊರೆತಿರುವ ಒಂದು ಶಾಸನವು ಕ್ರಿ.ಶ. 943 ಕ್ಕೆ ಸೇರಿದ್ದು, ಅದುನೊಳಂಬರ ಪ್ರಾಚೀನ ಉಲ್ಲೇಖವಾಗಿದೆ. ಅದರಲ್ಲಿ ನೊಳಂಬ ವಂಶಾವಳಿಯೂ ದೊರೆತಿದೆ.

ತುಮಕೂರು ಜಿಲ್ಲೆಯಲ್ಲಿ ನೊಳಂಬ ಮಹೇಂದ್ರ (ಮಹೇಂದ್ರಾಧಿರಾಜ)ನ ಮೂರು ಶಾಸನಗಳು ದೊರೆತಿದ್ದು, ಅವುಗಳಲ್ಲಿ ಅವನು ಚೋಳರನ್ನು ಸೋಲಿಸಿದ್ದ ವಿಷಯ ದಾಖಲಾಗಿದೆ. ಒಂದು ಶಾಸನವು ಅವನು ಬರಗೂರಿನಲ್ಲಿದ್ದಾಗ ತನ್ನ ಅರಮನೆಯನ್ನೇ ಮಹದೇವನಿಗೆ ದಾನ ನೀಡಿ, ವಿಗ್ರಹ ಪ್ರತಿಷ್ಠೆ ಮಾಡಿ ಸೀರೆನಾಡಿನ ನಂದೂರನ್ನು ದಾನ ನೀಡಿದ ವಿಷಯ ಉಲ್ಲೇಖಿತವಾಗಿದೆ. ಮಹೇಂದ್ರನ ಮಗ ಅಯ್ಯಪದೇವ ಅಥವಾ ಅಣ್ಣಿಗನೂ ಬರಗೂರಿನ ಮಹೇಂದ್ರೇಶ್ವರ ದೇವಾಲಯಕ್ಕೆ ದಾನ ನೀಡಿದ್ದಾನೆ. ಅಯ್ಯಪದೇವನ ಮಗ ಬೀರನೊಳಂಬನು ಗಂಗರ ಬೂತುಗನ ವಿರುದ್ಧ ಹೋರಾಡಿದನು. ಬಹುಶಃ ಆಗ ಅವನು ಚಾಲುಕ್ಯರ ನೆರವನ್ನು ಪಡೆದಿರಬೇಕು ಎಂದು ಊಹಿಸಲು ಆತನದೇ ಒಂದು ಶಾಸನವು ಅವನನ್ನು ' ಅಹವಮಲ್ಲ ನೊಳಂಬ ' ಎಂದು ಸಂಬೋಧಿಸಿರುವುದು ಕಾರಣವಾಗಿದೆ. ಬಹುತೇಕ ಚಾಲುಕ್ಯರಿಗೆ ನೊಳಂಬರು ನೆರವಾಗಿ ರಾಷ್ಟ್ರಕೂಟರಿಂದ ಚಾಲುಕ್ಯರು ಮತ್ತೆ ಸಾಮ್ರಾಜ್ಯವನ್ನು ಪಡೆದಿರಬಹುದೆಂದು ಭಾವಿಸಬಹುದಾಗಿದೆ. ಮೊದಲಿಗೆ ರಾಷ್ಟ್ರಕೂಟರ ಮಾಂಡಳಿಕರಾಗಿದ್ದ ನೊಳಂಬರು, ಆ ನಂತರ ಚಾಲುಕ್ಯರ ಆಶ್ರಯ ಪಡೆದರು. ಈ ನಡುವೆ ರಾಷ್ಟ್ರಕೂಟರ ಪರವಾಗಿದ್ದಾಗಲೇ ಗಂಗರಿಂದ ಸೋಲಿಸಲ್ಪಟ್ಟು ತೊಂದರೆಗೆ ಒಳಗಾಗಿದ್ದರು. ಆ ಸಂದರ್ಭದಲ್ಲೇ ಗಂಗ ಮಾರಸಿಂಹನು ' ನೊಳಂಬ ಕುಲಾಂತಕ' ಎಂಬ ಬಿರುದನ್ನು ಪಡೆದಿದ್ದ. ಚೋಳ-ನೊಳಂಬ, ಚೋಳ-ಗಂಗ ಹೋರಾಟಗಳಲ್ಲಿ ಚೋಳರ ಕೈ ಮೇಲಾದ ಸಂದರ್ಭಗಳಲ್ಲಿ ಅತ್ಯಲ್ಪ ಕಾಲಕ್ಕಾದರೂ ಅವರು ತುಮಕೂರು ಜಿಲ್ಲೆಯ ಕೆಲವು ಭಾಗಗಳಲ್ಲಿ ಆಳಿದ್ದಾರೆ. ಕುಣಿಗಲ್ ಮತ್ತು ಮಧುಗಿರಿ ತಾಲ್ಲೂಕುಗಳಲ್ಲಿ ಅವರ ಆಳ್ವಿಕೆ (ರಾಜಾಧಿರಾಜ ಮತ್ತು ರಾಜೇಂದ್ರ ) ಇದ್ದುದಕ್ಕೆ ಶಾಸನಾಧಾರಗಳಿವೆ.

ತುಮಕೂರು ಜಿಲ್ಲೆಯಲ್ಲಿ ದೊರೆತಿರುವ ಹೊಯ್ಸಳರ ಪ್ರಾಚೀನ ಶಾಸನದ ಕಾಲ ಕ್ರಿ.ಶ. 1078. ಆಗ ಹೊಯ್ಸಳ ರಾಜ್ಯವಾಳುತ್ತಿದ್ದವನು ವಿನಯಾದಿತ್ಯ. ಆನಂತರ ಬಿಟ್ಟಿದೇವ ಅಥವಾ ವಿಷ್ಣುವರ್ಧನನು ಗಂಗವಾಡಿ 96000 ಮತ್ತು ನೊಳಂಬವಾಡಿ 32000 ಎರಡನ್ನೂ ಒಟ್ಟಿಗೇ ಆಳುತ್ತಿದ್ದ. ಅವನ ಸಾಮಂತನಾಗಿದ್ದ ಗೂಳಿ ಬಾಚಿದೇವನು ಕೈದಾಳದಲ್ಲಿದ್ದು ಸರ್ವ ಧರ್ಮಗಳನ್ನು ಸಮನಾಗಿ ಕಂಡವನು. ಹೊಯ್ಸಳ ವೀರಬಲ್ಲಾಳ, ಎರಡನೆಯ ನರಸಿಂಹ, ಮೂರನೆಯ ನರಸಿಂಹ ಅವರ ಕಾಲದ ಕೆಲವು ವೀರಗಲ್ಲುಗಳು ಮತ್ತು ಶಾಸನಗಳೂ ಈ ಜಿಲ್ಲೆಯಲ್ಲಿ ದೊರೆತಿವೆ. ಮೂರನೆಯ ನರಸಿಂಹನ ಕಾಲದಲ್ಲೇ ಈಗಿನ ಶೆಟ್ಟಿಕೆರೆಯು ಆಗ ಭಾರತೀಶಪುರ ಎಂಬ ಹೆಸರಿನಲ್ಲಿ

ಅಗ್ರಹಾರವಾಗಿ ನಿರ್ಮಾಣವಾಯಿತು. ಹಾಗೆಯೇ ನಿರ್ಮಾಣವಾದ ಸರ್ವಜ್ಞ ವಿಜಯನರಸಿಂಹಪುರ ಎಂಬ ಅಗ್ರಹಾರವೇ ಈಗಿನ ತುರುವೇಕೆರೆ. ತುಮಕೂರು ಜಿಲ್ಲೆಯ ಸ್ವಲ್ಪ ಭಾಗಗಳು ಹೊಯ್ಸಳ ರಾಮನಾಥನಿಗೆ ಸೇರಿದ್ದುವು. ಗುಬ್ಬಿ ತಾಲ್ಲೂಕಿನ ಕ್ರಿ.ಶ. 1331ರ ಒಂದು ಶಾಸನವು ಹೊಯ್ಸಳ ಮೂರನೆಯ ಬಲ್ಲಾಳನು ದೋರಸಮುದ್ರವು ನಾಶವಾದ ನಂತರ ಹೊಸದುರ್ಗದಲ್ಲಿದ್ದನೆಂದು ಉಲ್ಲೇಖಿಸಿದೆ.

ಕರ್ನಾಟಕದವರಲ್ಲದ 12 ನೆಯ ಶತಮಾನದ ಕಾಕತೀಯ ಅರಸರ ಒಂದು ತಾಮ್ರಶಾಸನವು ಮುಳುಕುಂಟೆಯಲ್ಲಿ ದೊರೆತಿದೆಯಾದರೂ, ಅದರ ವಿಶ್ವಾಸನೀಯತೆಯು ಪ್ರಶ್ನಾರ್ಹವಾಗಿರುವುದರಿಂದ, ಅವರ ಆಳ್ವಿಕೆ ಕರ್ನಾಟಕದಲ್ಲಿತ್ತು ಎಂದು ಖಚಿತವಾಗಿ ಹೇಳಲು ಸಾಧ್ಯವಾಗಿಲ್ಲ. ಹೊಯ್ಸಳ 4ನೆಯ ವಿರೂಪಾಕ್ಷ ಬಲ್ಲಾಳನ ಕ್ರಿ.ಶ. 1343ರ ಒಂದು ಶಾಸನವೂ ತುಮಕೂರು ಜಿಲ್ಲೆಯಲ್ಲಿ ದೊರೆತಿದೆ.

ನಮಗೆ ತುಮಕೂರು ಜಿಲ್ಲೆಯಲ್ಲಿ ದೊರೆತಿರುವ ವಿಜಯನಗರ ಕಾಲದ ಮೊದಲ ಶಾಸನ ಕ್ರಿ.ಶ. 1354ರದು. ಪಾವಗಡ ತಾಲ್ಲೂಕಿನ ಈ ಶಾಸನವು 1ನೆಯ ಬುಕ್ಕನ ಆಳ್ವಿಕೆಯನ್ನು ಉಲ್ಲೇಖಿಸಿದೆ. ಎರಡನೆಯ ಹರಿಹರನ ಉಲ್ಲೇಖವಿರುವ ಕುಣಿಗಲ್ ತಾಲ್ಲೂಕಿನ ಕ್ರಿ.ಶ. 1380ರ ಒಂದು ಶಾಸನವು ಹರಿಹರನ ತಮ್ಮ ಮಲ್ಲಪ್ಪ ಒಡೆಯರ ಮಗ ಚನ್ನಪ್ಪ ಒಡೆಯನು ಆದೋನಿಯ ಬಳಿ ಮುಸಲ್ಮಾನರನ್ನು ಸೋಲಿಸಿದನೆಂದು ತಿಳಿಸುತ್ತದೆ. ಪಾವಗಡ ತಾಲ್ಲೂಕಿನಲ್ಲಿ ಮೊದಲ ದೇವರಾಯನ ಉಲ್ಲೇಖವಿರುವ ಶಾಸನವಿರುವಂತೆಯೇ, ಬಹುಶಃ ಅವನದೇ ಎಂದು ತಿಳಿಯಬಹುದಾದ ಒಂದು ತಾಮ್ರ ಶಾಸನ ತುಮಕೂರು ತಾಲ್ಲೂಕಿನ ಹುಳ್ಳೇನ ಹಳ್ಳಿಯಲ್ಲಿ ದೊರೆತಿದೆ. ಸಾಳುವ ನರಸಿಂಹನ ಒಂದು ತಾಮ್ರ ಶಾಸನ ತುಮಕೂರು ತಾಲ್ಲೂಕಿನಲ್ಲೇ ದೊರೆತಿದ್ದು ಅದರ ಕಾಲ ಕ್ರಿ.ಶ. 1486. ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿ ಕೃಷ್ಣದೇವರಾಯನ ಕಾಲದ ಶಾಸನಗಳೂ ಪಾವಗಡ ತಾಲ್ಲೂಕಿನಲ್ಲಿ ಕೃಷ್ಣದೇವರಾಯನ ಕಾಲದ ಶಾಸನಗಳೂ ಪಾವಗಡ ತಾಲ್ಲೂಕಿನಲ್ಲಿ ಅಚ್ಚುತರಾಯನ ಶಾಸನಗಳು, ತುಮಕೂರು ತಾಲ್ಲೂಕಿನಲ್ಲಿ ಸದಾಶಿವರಾಯನ ಕಾಲದ ಶಾಸನಗಳೂ ದೊರೆತಿವೆ. ಅಳಿಯ ರಾಮರಾಯ ಮತ್ತು ಇಮ್ಮಡಿ ವೆಂಕಟಪತಿರಾಯನ ಕಾಲದ ಶಾಸನಗಳೂ ಈ ಜಿಲ್ಲೆಯಲ್ಲಿ ದೊರೆತಿವೆ. ವಿಜಯನಗರದ ಅರಸರಲ್ಲಿ ಬುಕ್ಕನಿಂದ ಆರಂಭವಾಗಿ ವೆಂಕಟಪತಿ ರಾಯನ ವರೆಗೆ ಬಹುತೇಕ ಎಲ್ಲ ಅರಸರ ಶಾಸನಗಳೂ ಈ ಜಿಲ್ಲೆಯಲ್ಲಿ ದೊರೆಯುವುದರಿಂದ ಇದು ಅವರ ಆಳ್ವಿಕೆಗೆ ಸದಾ ಸೇರಿದ್ದ ಭೂಭಾಗ ಎಂದು ತಿಳಿಯುತ್ತದೆ.

ವಿಜಯನಗರದ ಅರಸರ ಕಾಲದಲ್ಲೇ ಹಲವಾರು ಪಾಳೆಯಗಾರರು ತುಮಕೂರು ಜಿಲ್ಲೆಯಲ್ಲೂ ಆಳ್ವಿಕೆ ನಡೆಸಿದರು. ಅವರೆಲ್ಲರೂ ವಿಜಯನಗರದ ಪತನದವರೆಗೆ ವಿಜಯನಗರದ ಸಾಮಂತರಂತೆಯೇ ಆಳಿದರು. ಅವರಲ್ಲಿ ಬಹುಮುಖ್ಯ ಮನೆತನಗಳೆಂದರೆ ನಿಡುಗಲ್, ಹೊಳವನಹಳ್ಳಿ, ಮಧುಗಿರಿ, ಹಾಗಲವಾಡಿ ಪಾಳೆಯಗಾರರು. ಇವರಲ್ಲದೆ ಜಮೀಂದಾರಿಕೆಯ ವ್ಯಾಪ್ತಿಯಲ್ಲೇ ಇದ್ದ ಹೆಬ್ಬೂರಿನ ಪಾಳೆಯಗಾರರೂ ಸೇರುತ್ತಾರೆ. ನಿಡುಗಲ್ ಪಾಳೆಯಗಾರರು ಹರತಿ ತಿಪ್ಪನಾಯಕನ ವಂಶಸ್ಥರು. ಇವರು ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕಿನಲ್ಲಿ ಹೆಚ್ಚು ಅಧಿಕಾರ ಹೊಂದಿದ್ದರು. ಇವರು ವಿಜಯನಗರದ ಅರಸರ ಸಮಕಾಲೀನರು.

ವಿಜಯನಗರದ ಕಾಲದಲ್ಲೇ ಆಳ್ವಿಕೆಯನ್ನಾರಂಭಿಸಿ ಆನಂತರವೂ ಬಹಳ ಕಾಲ ಆಳ್ವಿಕೆ ನಡೆಸಿದ ಹಾಗಲವಾಡಿ ನಾಯಕರು ತುಮಕೂರು ಜಿಲ್ಲೆಯ ರಾಜಕೀಯ ಇತಿಹಾಸದಲ್ಲಿ ಪ್ರಮುಖ ಸ್ಥಾನ ಪಡೆಯುತ್ತಾರೆ. ಎರಿಮಾದ ನಾಯಕನಿಂದ ಆರಂಭವಾಗಿ ಚನ್ನಬಸಪ್ಪ ನಾಯಕನೊಂದಿಗೆ ಕೊನೆಗೊಂಡ ಹಾಗಲವಾಡಿ ಪಾಳೆಯಗಾರರ ವಂಶವು ಪ್ರಬಲವಾದ ಪಾಳೆಯಪಟ್ಟನ್ನು ಹೊಂದಿತ್ತು. ಚನ್ನಬಸಪ್ಪನಾಯಕನು ಹೈದರನೊಡನೆ ಹೋರಾಡಿ ಸೋತು, ಸೆರೆಯಾದ. ಅಲ್ಲಿಗೆ ಹಾಗಲವಾಡಿ ಪಾಳೆಯಗಾರರ ಆಳ್ವಿಕೆ ಕೊನೆಗೊಂಡಿತು. ಹಾಗೆಯೇ ಹೈದರನಿಂದ ಸೋತು ಮೈಸೂರು ಸಂಸ್ಥಾನಕ್ಕೆ ಸೇರಿಹೋದ ಮತ್ತೊಂದು ಪಾಳೆಯಪಟ್ಟು ಹೊಳವನಹಳ್ಳಿಯದು. ದೇವರಾಯನದುರ್ಗ , ಮಾಕಳಿದುರ್ಗ ಮತ್ತು ಚನ್ನರಾಯನ ದುರ್ಗಗಳನ್ನು ಪ್ರಬಲ ನೆಲೆಗಳಾಗಿ ಹೊಂದಿದ್ದ ಹೊಳವನಹಳ್ಳಿಯ ಪಾಳೆಯಗಾರರು ಕೊರಟಗೆರೆ ತಾಲ್ಲೂಕನ್ನು ಸುಮಾರು 2 ಶತಮಾನಗಳಿಗೂ ಹೆಚ್ಚು ಕಾಲ ಆಳಿದರು.

ಮಧುಗಿರಿ ತಾಲ್ಲೂಕನ್ನು ಆಳಿದ ಮಧುಗಿರಿ ಪಾಳೆಯಗಾರರ ಪ್ರಮುಖ ನೆಲೆ ಮಧುಗಿರಿಯಾಗಿತ್ತು. ಇವರ ಮೈಸೂರಿನ ದಳವಾಯಿ ದೇವರಾಜನಿಗೆ ಸೋತು ಸೆರೆಯಾದರು. ಹೀಗೆ ಒಂದೊಂದೇ ಪಾಳೆಯಪಟ್ಟು ಅಂತಿಮವಾಗಿ ಮೈಸೂರು ಸಂಸ್ಥಾನದ ಸೇರಲ್ಪಟ್ಟ ಅಧೀನವಾಯಿತು. ಹೀಗೆ ಮೈಸೂರು ಸಂಸ್ಥಾನಕ್ಕೆ ಸೇರಲ್ಪಟ್ಟ ಮತ್ತೊಂದು ಪ್ರದೇಶ ಹೆಬ್ಬೂರು. ಹೆಬ್ಬೂರು ಒಂದು ಪಾಳೆಯಪಟ್ಟಿನ ಸ್ಥಾನಮಾನಗಳನ್ನು ಪಡೆಯದಿದ್ದರೂ, ಅಲ್ಲಿಯ ಜಮೀಂದಾರರು ಸ್ವತಂತ್ರವಾಗಿಯೇ ಆಭಾಗವನ್ನು ಆಳಿದರು. ಮೊದಲಿಗೆ ಮಾಗಡಿ ಕೆಂಪೇಗೌಡ, ನಂತರ ಹಾಗಲವಾಡಿ ಪಾಳೆಯಗಾರರು ಹೆಬ್ಬೂರು ಪ್ರಾಂತವನ್ನು ಆಕ್ರಮಿಸಿ, ಅಂತಿಮವಾಗಿ ಅದು ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಮೈಸೂರು ಸಂಸ್ಥಾನಕ್ಕೆ ಸೇರಿತು.

ರಕ್ಕಸತಂಗಡಿ ಯುದ್ಧ ನಡೆದು, ವಿಜಯನಗರವು ಪತನಗೊಂಡ ನಂತರ ಬಿಜಾಪುರದ ಸುಲ್ತಾನರು ತುಮಕೂರು ಜಿಲ್ಲೆಯ ಸಿರಾ ತಾಲ್ಲೂಕನ್ನು ವಿಶೇಷವಾಗಿ ಆಳಿದರು. ಹಲವು ಸುಬೇದಾರರು ಸಿರಾವನ್ನು ಕೇಂದ್ರವನ್ನಾಗಿ ಮಾಡಿಕೊಂಡು ಆಳಿದರು. ಕೊನೆಗೆ ಅದು ಹೈದರಾಲ್ಲೀಖಾನನಿಂದ ಗೆಲ್ಲಲ್ಪಟ್ಟು ಮೈಸೂರು ಸಂಸ್ಥಾನಕ್ಕೆ ಸೇರಿತು.

ತುಮಕೂರು ಜಿಲ್ಲೆಯ ಹೆಬ್ಬೂರನ್ನು ಪ್ರಥಮವಾಗಿ ಕ್ರಿ.ಶ. 1650ರಲ್ಲಿ ವಶಪಡಿಸಿಕೊಂಡ ಮೈಸೂರು ಅರಸರು ಕ್ರಮೇಣ ಮಧುಗಿರಿ, ಮಿಡಿಗೇಶಿ, ಬಿಜ್ಜವರ, ಚನ್ನರಾಯನದುರ್ಗ, ಹಾಗಲವಾಡಿ, ಹೊಳವನಹಳ್ಳಿ, ನಿಡುಗಲ್, ಸಿರಾ - ಇತ್ಯಾದಿ ಪ್ರದೇಶಗಳನ್ನು ಮೈಸೂರು ಸಂಸ್ಥಾನಕ್ಕೆ ಸೇರಿಸಿಕೊಂಡರು.

ಮೈಸೂರು ಅರಸರ ಕಾಲದಲ್ಲಿ ಒಗ್ಗೂಡಿದ ತುಮಕೂರು ಜಿಲ್ಲೆ ಅಂದಿನಿಂದಲೂ, ಅವರ ಒಡೆತನದಲ್ಲಿ ಪ್ರಾಶಸ್ತ್ಯಪಡೆಯಿತು. ಈಗಲೂ ತುಮಕೂರು ಜಿಲ್ಲೆಯಲ್ಲಿ ಹೊಸ ಶಾಸನಗಳು ಹಸ್ತಪ್ರತಿಗಳು ದೊರೆಯುತ್ತಿದ್ದು - ತುಮಕೂರು ಜಿಲ್ಲೆಯ ಇತಿಹಾಸವನ್ನು ಮತ್ತಷ್ಟು ಖಚಿತವಾಗಿ ಪುನರ್‌ರಚಿಸಬಹುದು. ಹೊನ್ನುಡಿಕೆಯ ಸಮೀಪದ ಜಲಗಾರದಿಬ್ಬದ ಬಳಿ ದೊರೆತ 2ನೇ ಮಾಧವ ಅಥವಾ ಶ್ರೀ ವಿಕ್ರಮನ ಶಾಸನ, ಶ್ರೀ ಪುರುಷನ ಶಾಸನ, ಹೊಸದಾಗಿ ಬೆಳಕಿಗೆ ಬಂದ ಪ್ರಾಗಿತಿಹಾಸದ ನೆಲೆಗಳು, ಪಾಳೆಯಗಾರರಿಗೆ ಸಂಬಂಧಿಸಿದ ಹೊಸ ವಿಷಯಗಳು ತುಮಕೂರು ಜಿಲ್ಲೆಯ ಇತಿಹಾಸವನ್ನು ಮತ್ತಷ್ಟು ಮುಖ್ಯವಾಗಿಸುತ್ತಿವೆ. ❑



# ಪರಿಸರ ರಕ್ಷಿಸಿ - ಪರಿಸರ ನಮ್ಮನ್ನು ರಕ್ಷಿಸುತ್ತದೆ

**ಟಿ.ವಿ.ಎನ್. ಮೂರ್ತಿ**
ತುಮಕೂರು

ಉಸಿರಾಡಿದರೆ ಬದುಕುತ್ತೇವೆ - ಊಟ ಮಾಡಿದರೆ ಹೊಟ್ಟೆ ತುಂಬುತ್ತದೆ. ಇವುಗಳಷ್ಟೆ ಸತ್ಯ ಪರಿಸರ ರಕ್ಷಿಸಿದರೆ, ಪರಿಸರ ನಮ್ಮನ್ನು ರಕ್ಷಿಸುತ್ತದೆ ಎಂಬ ನುಡಿ. ಈ ಭೂಮಿ ನಮಗೆ ಹಿರಿಯರಿಂದ ಬಂದ ಬಳುವಳಿ ಅಲ್ಲ. ನಾವು ನಮ್ಮ ಮಕ್ಕಳಿಂದ ಪಡೆದ ಸಾಲ. ಈ ಸಾಲವನ್ನು ಬಡ್ಡಿಯೊಂದಿಗೆ ಹಿಂದಿರುಗಿಸಬೇಕಾದುದು ನಮ್ಮ ಧರ್ಮ.

ಇಂದು ಮಾನವನಿಗೆ ಪರಿಸರ ನಾಶದ ಅರಿವಾಗಿದೆ. ತನ್ನನ್ನು ತಾನು ವಿನಾಶದ ಅಂಚಿನಲ್ಲಿರುವ ಒಂದು ಜೀವಿ ಎಂದು ಸಹ ತನ್ನನ್ನು ತಾನು ಗುರುತಿಸಿಕೊಂಡಿದ್ದಾನೆ. ನಿಜವಾದ ನಿಸರ್ಗ ರಕ್ಷಣೆಯು ಕೆಲಸಗಳಿಗಿಂತ ಭಾಷಣ - ಲೇಖನಗಳೇ ಹೆಚ್ಚಾಗಿವೆ. ರಕ್ಷಿಸುವ ಕೆಲ ಕೆಲಸಗಳು ಮಂದಗತಿಯಲ್ಲಿ ಸಾಗಿವೆಯಾದರೂ, ನಾಶದೊಂದಿಗೆ ಹೋಲಿಸಿದರೆ ಅನುಪಾತ ಅಜಗಜಾಂತರವಾಗಿರುತ್ತದೆ.

ತಾಂತ್ರಿಕತೆಯ ಎಲ್ಲಾ ಹೊಸ ಅನ್ವೇಷಣೆಗಳು ನೇರವಾಗಿ ಪ್ರಕೃತಿಯ ಮೇಲೆ ದಾಳಿ ನಡೆಸಿವೆ. ಇಂದು ಸಿಗುವ ಅಲ್ಪ ಖುಷಿಗಾಗಿ ಮುಂದಿನ ದುರಂತದ ದಿನಗಳನ್ನು ಮರೆಯುತ್ತಿದ್ದೇವೆ. ತಾಜ್‌ಮಹಲ್ - ಕುತುಬ್ ಮೀನಾರ್‌ನಂತಹ ಮಹಾಸ್ಮಾರಕಗಳನ್ನು ಅವುಗಳ ಕೆಳಗೆ ಯಾವುದೂ ಖನಿಜ ಇದೆ ಎಂದು ನಾಶ ಮಾಡಲಾದಿತೇ. ಯಾವುದೂ ಸಧ್ಯದ ಅವಶ್ಯಕತೆ ತುಂಬಲು ಭವಿಷ್ಯವನ್ನು ಹಾಳು ಮಾಡಿಕೊಳ್ಳಲಾಗುವುದೇ.

ಜೀವ ಸರಪಳಿಯಲ್ಲಿ ಪ್ರತಿ ಜೀವಿಯು ತನ್ನದೇ ಆದ ಮಹತ್ವವನ್ನು ಪಡೆದಿವೆ. ಯಾವುದೇ ಜೀವಿ ತನ್ನ ಜವಬ್ದಾರಿ ಮರೆತರೆ ಜೀವ ಸರಪಳಿ ಕಡಿದು, ಇಡೀ ಪರಿಸರವೇ ನಾಶವಾದೀತು. ಮಾನವ ಈ ಜೀವ ರಾಶಿಗಳಲ್ಲಿ ಅತಿ ಬುದ್ಧಿವಂತ ಹಾಗೂ ಯೋಚಿಸುವ ಶಕ್ತಿಯುಳ್ಳ ಜೀವಿ. ದುರಾದೃಷ್ಟವಶಾತ್ ಅವನೇ ಇಂದು ಬೇಜವಬ್ದಾರಿಯಿಂದ ವರ್ತಿಸುತ್ತಿದ್ದಾನೆ. ಚಂಡ ಮಾರುತ, ಭೂಕಂಪ, ಪ್ರವಾಹ, ಆಮ್ಲಮಳೆ, ಹೊರ್ಝೋನ್ ಪದರಕ್ಕೆ ಇವುಗಳೆಲ್ಲಾ ಪರಿಸರ ದೇವತೆ ಕೊಡುತ್ತಿರುವ ಕೆಲವೇ ಎಚ್ಚರಿಕೆಗಳು. ಮಾನವ ಎಲ್ಲದರ ಮೇಲೆ ಪ್ರಭುತ್ವ ಪಡೆದ ಹೆಮ್ಮೆಯಲ್ಲಿ ಈ ಎಚ್ಚರಿಕೆಗಳಿಗೆ ತಾತ್ಕಾಲಿಕ ಪರಿಹಾರ ಕಂಡು ಹಿಡಿದು ಹೆಮ್ಮೆಯಿಂದ ಬೀಗುತ್ತಿದ್ದಾನೆ. ಕಂಗೆಟ್ಟ ಪರಿಸರ ಯಾವಾಗ ಒಟ್ಟಾಗಿ ಎರಗುವುದೊ ಅಂದು ಪ್ರಳಯವಾಗಿ ಇಡೀ ಜೀವ ಸಂಕುಲವೆ ನಾಶವಾದೀತು. ಹೀಗೆ ಆಗುವ ಮುನ್ನ ಪ್ರಕೃತಿಯನ್ನು ಕಾಪಾಡಿ ನಮ್ಮ ಜೀವ ಉಳಿಸಿಕೊಳ್ಳುವುದು ತಕ್ಷಣ ಆಗಬೇಕಾದ ಕೆಲಸ.

ಪರಿಸರ ಮಾನವನ ಆಸೆಗಳನ್ನು ಈಡೇರಿಸುವ ಶಕ್ತಿ ಹೊಂದಿದೆ. ಆದರೆ ಅತಿ ಆಸೆಯನ್ನಂತೂ ಖಂಡಿತಾ ಅಲ್ಲ. ಹಿಂದೆ ನಮ್ಮ ಪೂರ್ವಜರು ಹಸಿರನ್ನು ಕಾಪಾಡಿದ್ದರಿಂದ ಇಂದು ನಾವು ಬಾವಿಗಳನ್ನು ತೋಡಿ ನೀರು ಪಡೆಯುವಂತಾಗಿದೆ. ಫಲವತ್ತಾದ ಭೂಮಿ ನಮಗೆ ಸಿಕ್ಕಿದೆ. ನಾವು ಮತ್ತೆ ಕೂಡಿಡದೇ ಪೂರ್ವಜರು ಕೂಡಿಟ್ಟ ನೈಸರ್ಗಿಕ ಸಂಪತ್ತನ್ನೆಲ್ಲಾ ಮಿತಿಯಿಲ್ಲದೇ ಬಳಸಿ ಖಾಲಿ ಮಾಡುತ್ತಿದ್ದೇವೆ.

ಜೀವ ಸೃಷ್ಟಿಯು ಅಧ್ಭುತ ! ವನ್ಯ ಸಂಪತ್ತನ್ನು ಅವುಗಳ ತುಪ್ಪಳ ಮಾಂಸಕ್ಕಾಗಿ ಕೊಂದು ಒಂದೆಡೆ ತಿಂದರೆ, ಮತ್ತೊಂದೆಡೆ ವನ್ಯ ಜೀವಿಗಳ ಆವಾಸವಾದ ಅರಣ್ಯವನ್ನು ನಾಶ ಮಾಡಿ ಒತ್ತಡ ಹೇರಲಾಗುತ್ತಿದೆ. ಹೀಗೆ ಮುಂದುವರೆದರೆ ಭವಿಷ್ಯದಲ್ಲಿ ಹುಲಿ - ಸಿಂಹ ಎಂದರೆ, ಮುಂದಿನ ಪೀಳಿಗೆ ಇವೆಲ್ಲಾ ಇರಲೇ ಇಲ್ಲ ಎಲ್ಲಾ ಕಟ್ಟು ಕತೆ ಎಂದಾರೂ. ವನ್ಯ ಜೀವಿಗಳ ಮಹತ್ವ ಅರಿಯುವ ಮುನ್ನವೇ ಅವು ನಶಿಸಿ ಮುಂದೆ ಪರಿತಪಿಸುವ ದಿನಗಳು ದೂರವಿಲ್ಲ.

**ಇಂದು ಮಾನವನಿಗೆ ಪರಿಸರ ನಾಶದ ಅರಿವಾಗಿದೆ. ತನ್ನನ್ನು ತಾನು ವಿನಾಶದ ಅಂಚಿನಲ್ಲಿರುವ ಒಂದು ಜೀವಿ ಎಂದು ಸಹ ತನ್ನನ್ನು ತಾನು ಗುರುತಿಸಿಕೊಂಡಿದ್ದಾನೆ. ನಿಜವಾದ ನಿಸರ್ಗ ರಕ್ಷಣೆಯು ಕೆಲಸಗಳಿಗಿಂತ ಭಾಷಣ - ಲೇಖನಗಳೇ ಹೆಚ್ಚಾಗಿವೆ.**

ತಾಂತ್ರಿಕತೆ ಎಷ್ಟೆ ಮುಂದುವರೆದರೂ ನೈಜ ಪರಿಸರವನ್ನು ಪ್ರಯೋಗಾಲಯದಲ್ಲಿ ಸೃಷ್ಟಿಸುವುದು ಅಸಾಧ್ಯವಾದ ಮಾತು. ಈ ಕ್ಷಣವೆ ನಮ್ಮ ಕೈಲಾದಷ್ಟು ಪರಿಸರ ರಕ್ಷಿಸುವ ಕೆಲಸ ಮಾಡದಿದ್ದರೆ ನಮ್ಮ ಸಂತತಿಯನ್ನು ನಾವೇ ನಿಧಾನವಾಗಿ ವಿಷಪ್ರಾಶಾನ ಮಾಡಿ ಕೊಂದಂತಾದೀತು. ಬನ್ನಿ ಎಲ್ಲಾದರೂ ಒಟ್ಟಾಗಿ ಭವಿಷ್ಯದ ನಮ್ಮ ಸಂತತಿಯ ಬಗ್ಗೆ ಚಿಂತಿಸಿ, ಪರಿಸರ ರಕ್ಷಿಸುವಲ್ಲಿ ಕೈ ಜೋಡಿಸೋಣ. "ಪರಿಸರೋ ರಕ್ಷತಿ ರಕ್ಷತಃ ❑

> ಕಡು ಬಡವರು ಸಹ ಇದು ತಮ್ಮ ದೇಶವೆಂದು ಭಾವಿಸುವ ಹಾಗೂ ಆ ದೇಶದ ನಿರ್ಮಾಣದಲ್ಲಿ ಪರಿಣಾಮಕಾರಿ ಧನಿಯಿಂದ ಭಾಗವಹಿಸಲು ಅವಕಾಶ ಇರುವ ಭಾರತಕ್ಕಾಗಿ ನಾನು ದುಡಿಯುತ್ತೇನೆ. ಅತಿ ಹೆಚ್ಚಿನ ಮಟ್ಟದ ಅಥವಾ ಅತಿ ಕಡಿಮೆ ಮಟ್ಟದ ಜನರು ಇಲ್ಲದ, ವಿವಿಧ ಕೋಮಿನ ಜನರು ಅತ್ಯಂತ ಸೌಹಾರ್ದದಿಂದ ಬದುಕುವ ಭಾರತ-ನನ್ನ ಕನಸಿನ ಭಾರತ
>
> *- ಮಹಾತ್ಮಗಾಂಧಿ*

# ಅಗ್ನಿಸ್ ಬೆಡೆನ್ ಪೊವೆಲ್

ಕು॥ ಪ್ರೇಮಾ

ಪ್ರಾರಭ್ಯತೆ ನಖಲು ವಿಘ್ನ ಭಯೇನ ನೀಚೈಃ
ಪ್ರಾರಭ್ಯ ವಿಘ್ನ ವಿಹಿತಾ ವಿರಯಂತಿ ಮಧ್ಯಾಃ
ವಿಘ್ನೈಃ ಪುನಃ ಪುನರಪಿ ಪ್ರತಿಹನ್ಯಮಾನಾಃ
ಪ್ರಾರಬ್ಧ ಮುತ್ತ ಮಜನಾ ನ ಪರಿತ್ಯಜಂತಿ ॥

ಜಗತ್ತಿನಲ್ಲಿ ಕೆಲವರು ವಿಘ್ನವೆಲ್ಲಿ ಬರುವುದೋ ಎಂಬ ಭಯದಿಂದ ಕೆಲಸವನ್ನೇ ಪ್ರಾರಂಭಿಸುವುದಿಲ್ಲ. ಇಂತವರು ಕೆಳವರ್ಗದ ಜನರೆನಿಸಿಕೊಳ್ಳುತ್ತಾರೆ. ಇನ್ನು ಕೆಲವರು ಕಾರ್ಯ ಪ್ರಾರಂಭ ಮಾಡಿ ಮಧ್ಯದಲ್ಲಿ ವಿಘ್ನಗಳು ಬಂದಾಗ ಆ ಕಾರ್ಯವನ್ನು ಬಿಟ್ಟುಬಿಡುತ್ತಾರೆ. ಇವರು ಮಧ್ಯಮ ವರ್ಗದ ಜನರೆನಿಸಿ ಕೊಳ್ಳುತ್ತಾರೆ. ಆದರೆ ಇನ್ನು ಕೆಲವರು ವಿಘ್ನಗಳು ಮೇಲಿಂದ ಮೇಲೆ ಬಂದರೂ ಅವುಗಳನ್ನು ಎದುರಿಸಿ ಕಾರ್ಯವನ್ನು ಪ್ರಾರಂಭಿಸುತ್ತಾರೆ, ಮುನ್ನಡೆಸುತ್ತಾರೆ ಮುಕ್ತಾಯಗೊಳಿಸುತ್ತಾರೆಯೇ ವಿನಃ ಕಾರ್ಯ ಮಾಡುವುದನ್ನು ತ್ಯಜಿಸುವುದಿಲ್ಲ ಇಂತಹ ಉತ್ತಮ ವರ್ಗದ ಮಹಾನುಭಾವರ ಸಾಲಿಗೆ ಸೇರಿದವರು ಕು ॥ ಅಗ್ನಿಸ್ ಬೆಡೆನ್ ಪಾವೆಲ್.

ದಿ॥ ಅಗ್ನಿಸ್ ಬೆಡೆನ್ ಪಾವೆಲ್ ಇವರು ಸ್ಕೌಟ್ ಚಳುವಳಿಯ ಸಂಸ್ಥಾಪಕರಾದ ದಿ ॥ ಲಾರ್ಡ್ ಬೆಡೆನ್ ಪಾವೆಲ್ಲರ ಏಕ ಮಾತ್ರ ಸಹೋದರಿ. ಅಗ್ನಿಸ್ ಬೆಡೆನ್ ಪಾವೆಲ್ಲರು ತಮ್ಮ ಕುಟುಂಬದ ಇತರ ಸದಸ್ಯರಂತೆ ತುಂಬಾ ಚುರುಕಾಗಿದ್ದರು. ಅವರೊಬ್ಬ ಒಳ್ಳೆಯ ಸಂಗೀತ ವಿದೂಷಿಯಾಗಿದ್ದರು, ಮತ್ತು ಚಿತ್ರಕಲಾಕಾರರೂ, ಉತ್ತಮ ಕರಕುಶಲಕಾರ್ತಿಯರೂ ಅಗಿದ್ದರು. ಆ ಕಾಲದಲ್ಲಿ ಇಂಗ್ಲೆಂಡಿನಲ್ಲಿ ಹೆಣ್ಣು ಮಕ್ಕಳು ಮನೆಯ ಆಶ್ರಯದಲ್ಲಿಯೇ ಇರಬೇಕಾಗುತ್ತಿತ್ತು ಮನೆಯಲ್ಲಿಯೇ ಚಿತ್ರಕಲಾ ಭ್ಯಾಸ , ಸಾಕುಪ್ರಾಣಿಗಳನ್ನು ನೋಡಿಕೊಳ್ಳುವುದು ಮುಂತಾದ ಹವ್ಯಾಸಗಳಿಗೆ ಅವಕಾಶವಿತ್ತೆ ವಿನಃ ಮನೆಯಿಂದ ಹೊರಗೆ ಬಂದು ಸಾಹಸಮಯ ಚಟುವಟಿಕೆಗಳಲ್ಲಿ ತೊಡಗಲು ಸಾಕಷ್ಟು ಪ್ರೋತ್ಸಾಹವಿರಲಿಲ್ಲ. ಇಂತಹ ಕಾಲಮಾನದಲ್ಲಿ ರಾಬರ್ಟ್ ಬೆಡೆನ್ ಪಾವೆಲ್ಲರು ಹೆಣ್ಣು ಮಕ್ಕಳಿಗಾಗಿ ಗೈಡ್ ಚಳುವಳಿಯನ್ನು ಸಂಘಟಿಸಲು ಕೇಳಿದಾಗ ಕುಹಕ ಸಮಾಜವನ್ನು ಲೆಕ್ಕಿಸದೆ ಸಂಪೂರ್ಣ ಮನಸ್ಸಿನಿಂದ ಗರ್ಲ್ಸ್ ಗೈಡ್ ಚಳುವಳಿಯನ್ನು ಸಂಘಟಿಸಲು ಒಪ್ಪಿಕೊಂಡರು.

ಕು ॥ ಅಗ್ನಿಸ್ ಬೆಡೆನ್ ಪಾವೆಲ್ಲರ ವ್ಯಕ್ತಿತ್ವ ಹಾಗೂ ಅವರ ಪ್ರಭಾವವೇ ಆಗಿನ ಕಾಲದಲ್ಲಿ ಗರ್ಲ್ಸ್ ಗೈಡ್ ಚಳುವಳಿಯ ಬಗೆಗಿದ್ದ ಸಮಾಜದ ಬಲವಾದ ತಪ್ಪು ಕಲ್ಪನೆಗಳನ್ನು ವಿರೋಧಗಳನ್ನು ಎದುರಿಸಿ ಗರ್ಲ್ಸ್ ಗೈಡ್ ಚಳುವಳಿಯನ್ನು ಬದುಕಿಸಲು ಕಾರಣವಾಯಿತು. 1910 ರಲ್ಲಿ ಅವರು ಈ ಹೊಸ ಚಳುವಳಿಯ ಅಧ್ಯಕ್ಷಿಣಿಯರಾದರು. ಮತ್ತು ಕೆಲಸವನ್ನು ಪ್ರಾರಂಭಿಸಿದರು.

ಗಂಡು ಮಕ್ಕಳಿಗಾಗಿದ್ದ ಸ್ಕೌಟ್ ಚಳುವಳಿಯ ಕೈಪಿಡಿಯನ್ನು ಹೆಣ್ಣು ಮಕ್ಕಳಿಗನ್ವಯಿಸಿ ಹೆಣ್ಣು ಮಕ್ಕಳು ರಾಜ್ಯ ಕಟ್ಟುವಲ್ಲಿ ಹೇಗೆ ಸಹಾಯ ಮಾಡಬಲ್ಲರು ? ಎಂಬ ಶೀರ್ಷಿಕೆಯಲ್ಲಿ ಪುನಃ ಬರೆಯುವ ಕಾರ್ಯದಲ್ಲಿ ತೊಡಗಿ , ನಿರ್ವಹಿಸಿದರು. ಜನಸಾಮಾನ್ಯರಿಂದ, ಸಾರ್ವಜನಿಕರಿಂದ ಸಮಾಜದಿಂದ ಬಂದ ಟೀಕೆ ಟಿಪ್ಪಣಿಗಳನ್ನು ತಪ್ಪು ತಿಳುವಳಿಕೆಗಳನ್ನು ದುರ್ಭಾವನೆಗಳನ್ನು ತಿರಸ್ಕಾರವನ್ನು ಎದುರಿಸುವಲ್ಲಿ ಆಸಕ್ತಿ ತಾಳಿದರು.

ಪ್ರಾರಂಭದಲ್ಲಿ ಗೈಡ್ ಚಳುವಳಿಯು '' ಗರ್ಲ್ ಸ್ಕೌಟ್ '' ಎಂದು ನೊಂದಾಯಿಸಲ್ಪಟ್ಟರೂ, 1910, ಮೇ ತಿಂಗಳಲ್ಲಿ 11 ವಿಕ್ಟೋರಿಯಾ ರಸ್ತೆಯಲ್ಲಿರುವ ಲಂಡನ್ನಿನ ' ಸ್ಕೌಟ್ ಕಛೇರಿಯ ಒಂದು ಕೊಠಡಿಯನ್ನು ಗೈಡ್ ಕಛೇರಿಗಾಗಿ ಗೈಡ್ ಸಮಿತಿಯು ತೆಗೆದುಕೊಂಡಿತು. ಈ ಕಛೇರಿ ಯಲ್ಲಿ ಕು॥ ಅಗ್ನಿಸ್ ಬೆಡೆನ್ ಪಾವೆಲ್ಲರ ಸ್ವಂತ ದಳವೇ ಮೊಟ್ಟಮೊದಲು ನೊಂದಾಯಿಸಲ್ಪಟ್ಟಿತು. ಈ ಕಛೇರಿಯಲ್ಲಿ ಕು ॥ ಅಗ್ನಿಸ್ ಬೆಡೆನ್ ಪಾವೆಲ್ಲರು ಒಬ್ಬ ಕಾರ್ಯದರ್ಶಿ ಹಾಗೂ ತಮ್ಮ ಸಮಿತಿಯೊಂದಿಗೆ ಗೈಡ್ ಚಳುವಳಿಯ ಕಾರ್ಯವನ್ನು ಪ್ರಾರಂಭಿಸಿದರು. ಅಗ್ನಿಸ್ ಬೆಡೆನ್ ಪಾವೆಲ್ಲರ ಮೊಟ್ಟ ಮೊದಳ ದಳ ಫೆಬ್ರವರಿ ರಂದು ಉದ್ಘಾಟಿಸಲ್ಪಟ್ಟಿತು.

**ಆ ಕಾಲದಲ್ಲಿ ಇಂಗ್ಲೆಂಡಿನಲ್ಲಿ ಹೆಣ್ಣು ಮಕ್ಕಳು ಮನೆಯ ಆಶ್ರಯದಲ್ಲಿಯೇ ಇರಬೇಕಾಗುತ್ತಿತ್ತು ಮನೆಯಲ್ಲಿಯೇ ಚಿತ್ರಕಲಾಭ್ಯಾಸ , ಸಾಕುಪ್ರಾಣಿಗಳನ್ನು ನೋಡಿಕೊಳ್ಳುವುದು ಮುಂತಾದ ಹವ್ಯಾಸಗಳಿಗೆ ಅವಕಾಶವಿತ್ತೆ ವಿನಃ ಮನೆಯಿಂದ ಹೊರಗೆ ಬಂದು ಸಾಹಸಮಯ ಚಟುವಟಿಕೆಗಳಲ್ಲಿ ತೊಡಗಲು ಸಾಕಷ್ಟು ಪ್ರೋತ್ಸಾಹವಿರಲಿಲ್ಲ. ಇಂತಹ ಕಾಲದಲ್ಲಿ ಗರ್ಲ್ ಗೈಡ್ ಚಳುವಳಿಯನ್ನು ಸಂಘಟಿಸಿದರು.**

ಆಗಿನ ಕಾಲದಲ್ಲಿದ್ದ ಸಮವಸ್ತ್ರವನ್ನೇ ಅಗ್ನಿಸ್ ಬೆಡೆನ್ ಪಾವೆಲ್ಲರು ಧರಿಸುತ್ತಿದ್ದರು. ದೇಶದ ತುಂಬೆಲ್ಲ ನಡೆಯುವ ಮೇಳ, ಶಿಬಿರಗಳಿಗೆ ಹೋಗುತ್ತಿದ್ದರು. ಗೈಡ್ ಮಕ್ಕಳ ಸಂಗಡ ಮೇಲಿಂದ ಮೇಲೆ ಶಿಬಿರಗಳಲ್ಲಿ ವಾಸಿಸುತ್ತಿದ್ದರು. ಚಳುವಳಿಯ ಬಗೆಗೆ ಅನೇಕ ಲೇಖನಗಳನ್ನು ಬರೆದರು. ಪ್ರಕೃತಿಯ ಮಡಿಲು, ಬಯಲು ಸ್ಥಳಗಳಲ್ಲಿ ಗೈಡ್ ಚಳುವಳಿಯು ನಡೆಯುವುದನ್ನು ಎಂದೂ ತಡೆಯಲಿಲ್ಲ. 1920 ರಲ್ಲಿ ಬ್ರಿಟಿಷ್ ಗರ್ಲ್ ಗೈಡ್ ಸಂಸ್ಥೆಗೆ ಎಚ್.ಆರ್.ಎಚ್.ಪ್ರಿನ್ಸೆಸ್ ಮೇರಿ ಎಂಬುವಳು ಅಧ್ಯಕ್ಷರಾದರು. ಆಗ ಅಗ್ನಿಸ್ ಬೆಡೆನ್ ಪಾವೆಲ್ಲರು ತಮ್ಮ ಸ್ಥಾನಕ್ಕೆ ರಾಜಿನಾಮೆ ಕೊಟ್ಟರು ಮತ್ತು ಉಪಾಧ್ಯಕ್ಷರಾದರು. ಗೈಡ್ ಚಳುವಳಿಯ ಆಶ್ಚರ್ಯಕರವಾದ ರೀತಿಯಲ್ಲಿ ಬೆಳವಣಿಗೆ ಹೊಂದುವಂತೆ ಕೊನೆಯವರೆಗೂ ಧೈರ್ಯವನ್ನು ತೋರಿಸಿ ಈ ಚಳುವಳಿಗೆ ಸಹಾಯ ಮಾಡಿದರು . 1944 ಜೂನ 2ರಂದು ಅವರು



# ವಿಶ್ವವ್ಯಾಪಿ ಸ್ಕೌಟಿಂಗ್

**ಎನ್.ಎಂ. ಗುರುಸ್ವಾಮಿ**
ಲೀಡರ್ ಟ್ರೈನರ್ ( ಕಬ್ )
ಜಿಲ್ಲಾ ಕಾರ್ಯದರ್ಶಿ, ದಾವಣಗೆರೆ.

ಸ್ಕೌಟಿಂಗ್ ಒಂದು ವಿಶ್ವವ್ಯಾಪಿಯಾಗಿ ಬೆಳೆದಿರುವ ಯುವ ಚಳುವಳಿಯು. ಈಗ 150 ರಾಷ್ಟ್ರ ಮತ್ತು ರಾಜ್ಯಗಳಲ್ಲಿ 16 ಮಿಲಿಯನ್ ಸದಸ್ಯರಿರುತ್ತಾರೆ. ಲಾರ್ಡ್ ಬೇಡನ್ ಪೊವೆಲ್‌ರವರ ಮನೋಭಾವನೆಯ ಸ್ಕೌಟಿಂಗ್ ಫಾರ್ ಬಾಯ್ಸ್ ಪುಸ್ತಕದ ಮಾರ್ಗದರ್ಶನದ ಮೇಲೆ 1907 ರಲ್ಲಿ ಇಂಗ್ಲೆಂಡಿನಿಂದ ಸ್ಕೌಟಿಂಗ್ ಪ್ರಾರಂಭವಾಯಿತು. ಈ ಪುಸ್ತಕದ ಮಾರ್ಗದರ್ಶನದ ಕಾರ್ಯಕ್ರಮಗಳು ಯುವಕರಲ್ಲಿ ಮನವರಿಕೆಯಾಗಿ ಅತಿ ಅಲ್ಪಕಾಲದಲ್ಲಿಯೇ ವಿಶ್ವವ್ಯಾಪಿಯಾಯಿತು.

### ಈ ಸಂಸ್ಥೆಯ ನಿರ್ದೇಶನದಂತೆ

ಈ ಚಳುವಳಿಯು ಮಕ್ಕಳು ಮತ್ತು ಯುವ ಜನಾಂಗಕ್ಕಾಗಿ, ರಾಜಕೀಯವಲ್ಲದ ಸ್ವಯಂ ಸೇವೆಯ ಎಲ್ಲರಿಗೂ ತೆರೆದಿರುವ ಯಾವುದೇ ಮೂಲ, ಜನಾಂಗ ಅಥವಾ ಮತಗಳ ಭೇದವಿಲ್ಲದ ಎಲ್ಲರೂ ಅಳವಡಿಸಿಕೊಳ್ಳಬಹುದಾದಂತಹ ಉದ್ದೇಶ. ಮೂಲತತ್ವ ಮತ್ತು ಪದ್ಧತಿಯ ಆಧಾರದ ಮೇರೆಗೆ ಸ್ಥಾಪಿತವಾಗಿದೆ. ಈ ಚಳುವಳಿಯ ಉದ್ದೇಶವು ಯುವ ಪೀಳಿಗೆಯ ದೈಹಿಕ, ಮಾನಸಿಕ ( ಬೌದ್ಧಿಕ ) ಸಾಮಾಜಿಕ ಮತ್ತು ನೈತಿಕ ಅಥವಾ ಆಧ್ಯಾತ್ಮಿಕ ಅಥವಾ ಪಾರಮಾರ್ಥಿಕ, ಚೈತನ್ಯಗಳು ವೈಯಕ್ತಿಕವಾಗಿ ಅಸ್ತಿತ್ವಕ್ಕೆ ಬರುವಂತೆ ಅಭಿವೃದ್ಧಿಗೆ ನೆರವಾಗಿ ಜವಾಬ್ದಾರಿಯುತ ಪ್ರಜೆಯನ್ನಾಗಿ ತಯಾರಿಸುವುದು.

ಈ ಚಳುವಳಿಯ ಮೂಲ ತತ್ವವು ದೈವಭಕ್ತಿ, ಅಥವಾ ಅವರವರ ಧರ್ಮಶ್ರದ್ಧೆ ಇದ್ದು ನಿಷ್ಠೆಯಿಂದ ಧಾರ್ಮಿಕ ತತ್ವಗಳನ್ನು ಮತ್ತು ಕರ್ತವ್ಯಗಳನ್ನು ಒಪ್ಪಿ ನಡೆದುಕೊಳ್ಳುವುದು ಪರಧರ್ಮ ಸಹಿಷ್ಣುವಾಗಿರುವುದು. ಜಗತ್ತಿನ ಪಂಚಭೂತ ಸೃಷ್ಟಿಗೆ ಒಂದು ದಿವ್ಯ ಶಕ್ತಿ ಇದ್ದು ಆ ಶಕ್ತಿಯೇ ಸೃಷ್ಟಿಕರ್ತ ದೇವರು ಎಂಬ ನಂಬಿಕೆಯಿದ್ದು ಜಗತ್ತಿಗೆ ಒಬ್ಬನೇ ದೇವರು ಎಂದು ನಂಬಿ ಯಾವುದೇ ರೂಪ, ಆಕಾರ ಹೆಸರಿನಿಂದ ಅವರವರ ಧರ್ಮದಂತೆ ಸ್ಮರಣೆ ಅಥವಾ ಪೂಜೆ ಮಾಡಿ ಕೃತಜ್ಞತೆ ಸಲ್ಲಿಸುವುದು ಪರಮಾತ್ಮನು ಸರ್ವಾಂತರಯಾಮಿಯಾದುದರಿಂದ ನಾವು ಪೂಜಿಸುವ ವಸ್ತುಗಳಲ್ಲಿ ಮತ್ತು ನಮ್ಮಲ್ಲು ದೇವರಿದ್ದಾನೆ ಎಂಬ ನಂಬಿಕೆ ಇರಬೇಕು. ಅವರವರ ರಾಷ್ಟ್ರದ ಬಗ್ಗೆ ನಿಷ್ಠೆಯಿಂದ ಇದ್ದು ಪ್ರತಿಯೊಬ್ಬರೂ ಪರಸ್ಪರ ಶಾಂತಿ ಐಕಮತ್ಯ, ವಿಶ್ವಾಸ ಮತ್ತು ಸಹಕಾರದಿಂದ ಜೀವಿಸಬೇಕು ಮತ್ತು ರಾಷ್ಟ್ರಭಕ್ತಿ ಇರಬೇಕು. ತಮ್ಮ ಸಂಗಾತಿಗಳ ಘನತೆಗೆ ಗೌರವ ನೀಡಿ ಸಮಾಜಾಭಿವೃದ್ಧಿ ಕಾರ್ಯಗಳಲ್ಲಿ ಭಾಗವಹಿಸಿ ದೈವ ಸೃಷ್ಟಿ ಜಗತ್ತಿನ ಏಕಾಗ್ರತೆಗೆ ಕರ್ತವ್ಯ ನಿರ್ವಹಿಸಬೇಕು.

ತನ್ನ ವ್ಯಕ್ತಿತ್ವದ ಅಭಿವೃದ್ಧಿಗೆ ತಾನೇ ಹೊಣೆಗಾರನಾಗಿ ಸ್ವಾವಲಂಭಿಯಾಗಿರಬೇಕು. ಈ ಸಂಸ್ಥೆಯ ಕ್ರಮಾನುಸರಣೆ (ವಿಧಾನ) ಯು ಪ್ರಗತಿಪರ ಸ್ವಯಂ ಶಿಕ್ಷಣ ವ್ಯವಸ್ಥೆಯಾಗಿರುತ್ತದೆ. ಪ್ರತಿಜ್ಞ ವಿಧಿ ಮತ್ತು ನಿಯಮಪಾಲಿಸಿ ಕಾರ್ಯಾನುಭವದಿಂದ ಕಲಿಕೆ, ಸಣ್ಣ ಗುಂಪಿನ ಸದಸ್ಯತ್ವ ಮತ್ತು ನೇತೃತ್ವ ಕ್ರಮಬದ್ಧವಾಗಿ ಜವಾಬ್ದಾರಿಯನ್ನು ಕಂಡುಕೊಳ್ಳುವುದು ಮತ್ತು ಒಪ್ಪಿಕೊಳ್ಳುವುದು, ಸ್ವಯಂ ನಿಯಂತ್ರಣದಿಂದ ಶೀಲಸಂವರ್ಧನೆ, ನೈಪುಣ್ಯತೆ, ಆತ್ಮವಿಶ್ವಾಸ, ಸ್ವಸಹಾಯ, ಸಹಕಾರದಿಂದ ಹೊಂದಿಕೊಂಡು ಹೋಗುವುದು ಮತ್ತು ನೇತೃತ್ವವನ್ನು ವಹಿಸುವ ಸಾಮರ್ಥ್ಯ ಪಡೆಯುವುದು, ಉಪಯುಕ್ತ ಕೈ ಕೆಲಸಗಳು, ಸಮುದಾಯದ ಸೇವಾ ಕಾರ್ಯಗಳು, ಉತ್ತೇಜನಕಾರಿ ಹಾಗೂ ಕ್ರಮಬದ್ಧವಾಗಿ ಮುಂದುವರಿಯುವ ಚಟುವಟಿಕೆಗಳು, ಪ್ರಕೃತಿ ಮಧ್ಯೆ ಹೊರಾಂಗಣದಲ್ಲಿ ಚಟುವಟಿಕೆಗಳು ಮತ್ತು ಸೃಷ್ಟಿ ಸೌಂದರ್ಯ ವೀಕ್ಷಣೆಯ ಕಾರ್ಯಕ್ರಮಗಳು ಮುಂತಾದ ಪದ್ಧತಿಗಳಿರುತ್ತವೆ.

ಈ ಸ್ಕೌಟ್ ಚಳುವಳಿಯು ಅತ್ಯಲ್ಪ ಕಾಲದಲ್ಲಿ ಅತಿ ಶೀಘ್ರವಾಗಿ ವಿಶ್ವವ್ಯಾಪಿಯಾಗಲು ಈ ಚಳುವಳಿಯ ಕಾರ್ಯ ಯೋಜನೆ ಮತ್ತು ಚಟುವಟಿಕೆಗಳು ವಿಶ್ವದ ಎಲ್ಲಾ ರಾಷ್ಟ್ರಗಳ ಮಕ್ಕಳ ಮನಸ್ಸನ್ನಾಕರ್ಷಿಸಿದುವು. ಅಲ್ಲದೆ ಇದುವರೆವಿಗೂ ಯೋಚಿಸದ ಇನ್ನೊಂದು ಪ್ರಬಲ ಕಾರಣವೂ ಇದೆ. ಬ್ರಿಟಿಷ್ ಸಾಮ್ರಾಜ್ಯವು 'ರವಿ ಮುಳುಗದ ಸಾಮ್ರಾಜ್ಯ' ವಾಗಿತ್ತು. ಬಹುತೇಕ ಅನೇಕ ರಾಷ್ಟ್ರಗಳಲ್ಲೂ ಬ್ರಿಟೀಷ್ ವಸಾಹತುಗಳಿದ್ದವು. ಜಗತ್ತನ್ನೇ ಬ್ರಿಟಿಷ್ ಸಾಮ್ರಾಜ್ಯವನ್ನಾಗಿ ಮಾಡಿಕೊಳ್ಳಬೇಕೆಂಬ ಮಹಾತ್ವಾಕಾಂಕ್ಷೆಯೂ ಆಂಗ್ಲ ಸಾಮ್ರಾಜ್ಯಕ್ಕಿದ್ದ ಆಕಾಂಕ್ಷೆ ಇತಿಹಾಸಕಾರರಿಗೆಲ್ಲಾ ತಿಳಿದದ್ದೇ ಇದೆ.

ಆಗ ಪ್ರತಿಜ್ಞೆಯಲ್ಲಿ ಶ್ರೀಮಾನ್ ಮಹಾರಾಜರು : ಕ್ವೀನ್ : ಕಿಂಗ್ : ಎಂಪೆರರ್‌ಗೆ ಕರ್ತವ್ಯ ಮಾಡುತ್ತೇನೆ ಎಂದು ಇತ್ತು. 'ದೇಶಕ್ಕೆ' ಎಂಬ ಶಬ್ದವಿರಲಿಲ್ಲ. ರಾಷ್ಟ್ರಭಕ್ತಿ ಇರಲಿಲ್ಲ. ರಾಜಭಕ್ತಿ ಇತ್ತು. 'ರಾಜ ಪ್ರತ್ಯಕ್ಷ ದೇವತಾ' ಎಂಬ ನಾಣ್ಣುಡಿ ಇತ್ತು. ಪ್ರತಿಶಾಲೆಗಳಲ್ಲೂ ಮಹಾರಾಜರ ಫೋಟೋಗಳು ಇದ್ದು 'ಕಾಯೌ ಶ್ರೀಗೌರಿ' ಮೈಸೂರಿನ ಶ್ರೇಯಃ ಪ್ರಾರ್ಥನೆಯನ್ನು ಪ್ರತಿದಿನ ಶಾಲೆಯ ಪ್ರಾರಂಭದಲ್ಲಿ ಹೇಳಿಸುತ್ತಿದ್ದರು.

**ಈ ಸ್ಕೌಟ್ ಚಳುವಳಿಯು ಅತ್ಯಲ್ಪ ಕಾಲದಲ್ಲಿ ಅತಿ ಶೀಘ್ರವಾಗಿ ವಿಶ್ವವ್ಯಾಪಿಯಾಗಲು ಈ ಚಳುವಳಿಯ ಕಾರ್ಯ ಯೋಜನೆ ಮತ್ತು ಚಟುವಟಿಕೆಗಳು ವಿಶ್ವದ ಎಲ್ಲಾ ರಾಷ್ಟ್ರಗಳ ಮಕ್ಕಳ ಮನಸ್ಸನ್ನಾಕರ್ಷಿಸಿದುವು.**

ಇದರಿಂದ ಬ್ರಿಟಿಷ್ ಚಕ್ರವರ್ತಿಗಳು ಹಾಗೂ ರಾಜ, ಮಹಾರಾಜರು ಈ ಚಳುವಳಿಗೆ ಹೆಚ್ಚಿನ ಪುರಸ್ಕಾರ ನೀಡಿದರು. ಇದರಿಂದ ಆಗ

ಚಳುವಳಿಯು ಶೀಘ್ರವ್ಯಾಪ್ತಿಯಾಯಿತು. ಚಳುವಳಿಯ ಚಿಕ್ಕವರೂ ಮತ್ತು ದೊಡ್ಡವರೂ ನಿಷ್ಠೆಯಿಂದ ಕಾರ್ಯತತ್ಪರರೂ ಆಗಿದ್ದರು ಎಂದು ತಿಳಿಸುವುದು ತಪ್ಪಾಗಲಾರದು. ಚಳುವಳಿಯ ಸಂಘಟನೆಯು ಯೂನಿಟ್‌ನಿಂದ ಸ್ಥಳೀಯ ಸಂಸ್ಥೆ, ರಾಜ್ಯ, ರಾಷ್ಟ್ರ ಮತ್ತು ವಿಶ್ವಮಟ್ಟದವರೆಗೆ ವ್ಯಾಪಿಸಿದೆ. ಸ್ಕೌಟ್ ಚಳುವಳಿಯ ವಿಶ್ವ ಸಂಸ್ಥೆಯು ಅಂತರರಾಷ್ಟ್ರೀಯ, ಸರ್ಕಾರೇತರವಾದ ಮೂರು ಮುಖ್ಯ ಅಂಗಗಳನ್ನು ಹೊಂದಿದೆ.

1) ದಿ ವರ್ಲ್ಡ್ ಕಾನ್ಫರೆನ್ಸ್

2) ದಿ ವರ್ಲ್ಡ್ ಸ್ಕೌಟ್ ಕಮಿಟಿ

3) ದಿ ವರ್ಲ್ಡ್ ಸ್ಕೌಟ್ ಬ್ಯೂರೋ

ಲಂಡನ್‌ನಲ್ಲಿ 1920 ರಲ್ಲಿ ವರ್ಲ್ಡ್ ಜಾಂಬೋರಿ ಮುಗಿದ ತಕ್ಷಣವೇ ದಿ ಬಾಯ್ ಸ್ಕೌಟ್ಸ್ ಇಂಟರ್‌ನ್ಯಾಷನಲ್ ಬ್ಯೂರೋ ಸ್ಥಾಪನೆಯಾಯಿತು ಮತ್ತು ಆಗಲೇ 'ದಿ ಫಸ್ಟ್ ಇಂಟರ್ ನ್ಯಾಷನಲ್ ಕಾನ್ಫರೆನ್ಸ್' ಸಹಾ ನಡೆಯಿತು.

### ವಿಶ್ವ ಸ್ಕೌಟಿಂಗ್‌ನ ಐದು ಸಂಕೋಲೆಗಳ ನೋಟ

1) ವಂದನೆ

2) ಹಸ್ತಲಾಘವ

3) ಧ್ಯೇಯ

4) ಸ್ಕೌಟ್ ಚಿಹ್ನೆ

5) ಪ್ರತಿಜ್ಞೆ ಮತ್ತು ನಿಯಮ

ವಿಶ್ವದ ಎಲ್ಲಾ ರಾಷ್ಟ್ರಗಳಲ್ಲೂ ಇವು ಒಂದೇ ತೆರನಾಗಿರುತ್ತವೆ.

ವೂಸಂ : WOSM - WORLD ORGANISATION OF SCOUT - MOVEMENT

### ಸ್ಕೌಟ್ ಚಳುವಳಿಯ ವಿಶ್ವ ಸಂಸ್ಥೆ

ವ್ಯಾಗ್ಸ್ : WAGGS - WORLD ASSOCIATION OF GIRL GUIDES AND GIRL SCOUTS

### ಗರ್ಲ್ಸ್ ಗೈಡ್ಸ್ ಮತ್ತು ಗರ್ಲ್ಸ್ ಸ್ಕೌಟ್ಸ್ ವಿಶ್ವ ಸಂಸ್ಥೆ

ಇವು ಪ್ರತ್ಯೇಕ ಪ್ರತ್ಯೇಕವಾಗಿ ಸ್ವತಂತ್ರವಾಗಿ ಕಾರ್ಯ ನಿರ್ವಹಿಸುತ್ತಿವೆ.

ಭಾರತದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಒಂದೇ ಸಂಸ್ಥೆಯಾಗಿ 1950 ರಿಂದ ಕಾರ್ಯನಿರ್ವಹಿಸುತ್ತಿದೆ.

''ವರ್ಲ್ಡ್ ಬ್ಯೂರೋ'' ಮುಖ್ಯ ಕಛೇರಿಯು ಸ್ವಿಡ್ಜರ್ಲೆಂಡಿನ ಜಿನೀವಾದಲ್ಲಿದೆ. ವರ್ಲ್ಡ್ ಬ್ಯೂರೋದಲ್ಲಿ ಆಫ್ರಿಕಾ, ಅರಬ್, ಏಷಿಯಾಫೆಸಿಫಿಕ್, ಯೂರೋಪ್ ಮತ್ತು ಇಂಟರ್ ಅಮೇರಿಕಾ ಎನ್ನುವ ಐದು ರೀಜನ್‌ಗಳು ಇವೆ. ಭಾರತವು ಏಷ್ಯಾ ಫೆಸಿಫಿಕ್ ರೀಜನ್‌ಗೆ ಸೇರಿದೆ.

ವಿಶ್ವ ಸ್ಕೌಟ್ ಬ್ಯೂರೋವು ರಾಷ್ಟ್ರ ಸಂಸ್ಥೆಗಳಿಗೆ ಭೇಟಿ ನೀಡುವುದರ ಮೂಲಕ ಪತ್ರ ವ್ಯವಹಾರದ ಮೂಲಕ ಸ್ಕೌಟಿಂಗ್ ಅಭಿವೃದ್ಧಿಗೆ ನೆರವು ನೀಡುವುದು, ಟ್ರೈನಿಂಗ್, ಸೆಮಿನಾರ್, ವರ್ಕ್‌ಷಾಪ್, ಕಮ್ಯೂನಿಟಿ ಡೆವಲಪ್‌ಮೆಂಟ್, ಸಾಹಿತ್ಯ ಪ್ರಕಟಣೆ ಮತ್ತು ನಾಲ್ಕು ವರ್ಷಕ್ಕೊಂದು ಸಲ ವಿಶ್ವ ಜಾಂಬೋರಿ ಮುಂತಾದುವುಗಳನ್ನು ನಡೆಸುವುದು, ಯೂನಿಟ್‌ಗಳಿಂದ ತಲಾ ರೂ. 2-00 ನಂತೆ ವಸೂಲಾಗುವ ಹಣ ಇಲ್ಲಿಗೆ ಹೋಗುವುದು.

ವಿಶ್ವದ ನಾನಾ ರಾಷ್ಟ್ರದ ಜನಗಳು ವಿಶ್ವ ಜಾಂಬೋರಿಯಲ್ಲಿ ಒಂದೆಡೆ ಸೇರಿ ಕಾರ್ಯಚಟುವಟಿಕೆಗಳನ್ನು ನಡೆಸಿ ವಿಶ್ವ ಸಹೋದರ ಭಾವನೆಯನ್ನು ವೃದ್ಧಿಪಡಿಸಿಕೊಳ್ಳುವುದು ❑

'' ಜೈ ವಿಶ್ವ ವ್ಯಾಪಿ ಸ್ಕೌಟಿಂಗ್ ''

## ನಮ್ಮ ಜಿಲ್ಲೆ

### ತುರುವೇಕೆರೆ

**ಬಾಣಸಂದ್ರ ರೈಲು ನಿಲ್ದಾಣದಿಂದ ಸುಮಾರು 12 ಕಿ.ಮೀ. ದಕ್ಷಿಣಕ್ಕಿರುವ ತುರುವೇಕೆರೆ 13ನೇ ಶತಮಾನದಲ್ಲಿ ಕೋವಿದ ಬ್ರಾಹ್ಮಣರಿಗೆ ಬಳುವಳಿಯಾಗಿ ಬಂದ ಅಗ್ರಹಾರವಾಗಿತ್ತು. ತುರುವೇಕೆರೆಯಲ್ಲಿ ಹೊಯ್ಸಳ ಕಾಲದ ಅನೇಕ ದೇವಾಲಯಗಳಿದ್ದು ಚೆನ್ನಕೇಶವನ ದೇವಾಲಯ ಪ್ರಮುಖವಾದದ್ದು. ಜಗತ್ಪ್ರಸಿದ್ಧ ಸೋಮನಾಥಪುರ ದೇವಾಲಯವನ್ನು ನಿರ್ಮಿಸಿದ ಮಹಾದಂಡನಾಯಕ ಸೋಮಣ್ಣನೇ ಈ ದೇವಾಲಯವನ್ನೂ ನಿರ್ಮಿಸಿದ ಎಂದು ಹೇಳಲಾಗುತ್ತದೆ.**

**ಇಲ್ಲಿನ ಗಂಗಾಧರೇಶ್ವರ ದೇವಾಲಯದ ಪೂಜಾಮೂರ್ತಿ ಸುಂದರಮೂರ್ತಿಗಳಲ್ಲಿ ಒಂದಾಗಿದೆ. ಏಕ ಶಿಲೆಯಲ್ಲಿ ಕೊರೆಯ ಲಾಗಿರುವ ಸರ್ಪದ ಹೆಡೆಗಳಿಂದ ಭೂಷಿತವಾಗಿರುವ ಲಿಂಗ ಉತ್ತಮ ಶಿಲ್ಪಕಲೆಯ ಪ್ರತೀಕವಾಗಿದೆ. ಗ್ರಾನೈಟ್ ಶಿಲೆಯಿಂದ ನಿರ್ಮಿತವಾಗಿರುವ ಬಸವನ (ನಂದಿ) ವಿಗ್ರಹ ಇಂದಿಗೂ ತನ್ನ ಹೊಳಪನ್ನು ಕಳೆದುಕೊಂಡಿಲ್ಲ. ದೇವಾಲಯದ ಪೂರ್ವಭಾಗದಲ್ಲಿ ಕಲ್ಲಿನಿಂದ ಮಾಡಿರುವ ಘಂಟೆಯೊಂದಿದ್ದು ಇದನ್ನು ಬಾರಿಸಿದಾಗ ಲೋಹದ ಘಂಟೆಯ ನಿನಾದ ಹೊಮ್ಮುತ್ತದೆ. ಈ ಗ್ರಾಮದಲ್ಲಿರುವ ಮೂಲೆ ಶಂಕರೇಶ್ವರ ದೇವಾಲಯ ಕ್ರಿ.ಶ. 1260 ರಲ್ಲಿ ಹೊಯ್ಸಳಕಾಲದಲ್ಲಿ ನಿರ್ಮಿತವಾಯಿತು.**

